ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೬ ಜೂನ್ ೨೦೧೦ ಸಂಚಿಕೆ : ೬



ಪರಮಪೂಜ್ಯ ಶ್ರೀಗಳವರು ವಿದ್ಯಾರ್ಥಿಗಳ ಅರ್ಜಿಗಳನ್ನು ಪರಿಶೀಲಿಸಿ ಪ್ರವೇಶಕ್ಕೆ ಅನುಮತಿ ನೀಡಿ ಆಶೀರ್ವದಿಸುತ್ತಿರುವುದು



ಸರದಿಗಾಗಿ ಶ್ರೀಗಳವರ ಕಛೇರಿ ಮುಂದೆ ಕಾದು ಕುಳಿತಿರುವ ವಿದ್ಯಾರ್ಥಿಗಳು ಮತ್ತು ಪೋಷಕರು



ಶ್ರೀಮಠದಲ್ಲಿ ಪ್ರವೇಶ ಕೋರಿ ದೂರದ ಊರುಗಳಿಂದ ಆಗಮಿಸುತ್ತಿರುವ ವಿದ್ಯಾರ್ಥಿಗಳು ಮತ್ತು ಪೋಷಕರು









ಮುಖಪುಟ

ಸಂಪಾದಕ :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕ :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕ :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೬ ಜೂನ್ ೨೦೧೦ ಸಂಚಿಕೆ : ೬

## ಒಳಪುಟಗಳಲ್ಲಿ ..............

೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ -ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ತಾವೊಂದು ಬೋಧಿವೃಕ್ಷ. ತಾವೊಂದು ದೊಡ್ಡಾಲದಮರ -ಡಾ॥ ಶ್ರೀ ಶಿವಾನಂದ ಶಿವಾಚಾರ್ಯಸ್ವಾಮಿಗಳು
೬. ಸುಖ -ಹೆಚ್.ಎಸ್. ಸಿದ್ಧಗಂಗಪ್ಪ
೭. ಶರಣ ವಿಚಾರಧಾರೆ -ದೇ. ಜವರೇಗೌಡ
೧೨. ಅಣ್ವಸ್ತ್ರ ಜಗತ್ತಿಗೆ ಗುರುಬಸವಣ್ಣನವರ ವಿಶ್ವಶಾಂತಿಯ ಸಂದೇಶ -ಯೋಗೀಶ್ ನಿರ್ವಿಕಲ್ಪ
೧೬. ಶಂಕರಾಚಾರ್ಯರು -ಯು.ಎನ್. ಸಂಗನಾಳಮಠ
೧೮. ಪ್ರಾರಬ್ಧಕ್ಕಿಂತ ಪ್ರಯತ್ನ ಮಿಗಿಲು -ರಮೇಶಬಾಬು ಯಾಳಗಿ ಸಗರ
೨೧. ಗುಣಾತ್ಮಕ ಶಿಕ್ಷಣ ನೀಡುವಲ್ಲಿ ಶಿಕ್ಷಕರ ಪಾತ್ರ -ರಾಮೇಶ್ವರ ಡಾಣಿ
೨೬. ದಾನವತೆ ಅಳಿದು ಮಾನವ ಪ್ರಜ್ಞೆ ಜಾಗೃತವಾಗಲಿ -ಸ.ರಾ. ಸುಳಕೂಡೆ
೨೮. ನಮ್ಮ ಆಹಾರ ಆರೋಗ್ಯ ಭಂಡಾರ -ವಾಮನರಾವ್ ಹೊದಿಕೆ
೨೯. ಮಾವು -ರಾಜಶೇಖರಯ್ಯ
೩೦. ಪ್ರಕೃತಿ ಚಿಕಿತ್ಸೆ -ಜಿ.ವಿ.ವಿ. ಶಾಸ್ತ್ರಿ

ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಸದ್ದುಗದ್ದಲವಿರದ ಸಾಧನೆ

ಶ್ರೀಮಠದ ತುಂಬಾ ವಿದ್ಯಾರ್ಥಿಗಳ ಕಲರವ. ಅಂಗಳದಲ್ಲೆಲ್ಲಾ ಟ್ರಂಕುಗಳ ದರ್ಶನ. ಅಲ್ಲಲ್ಲಿ ಪುಟ್ಟಪುಟ್ಟ ಗುಂಪುಗಳು. ಉತ್ತರ ಕರ್ನಾಟಕದ ಬಿಜಾಪುರ, ರಾಯಚೂರು, ಗುಲ್ಬರ್ಗ, ಬೀದರ್, ಬಳ್ಳಾರಿ, ಹಾವೇರಿ, ಹುಬ್ಬಳ್ಳಿ, ಬೆಳಗಾವಿ ಜಿಲ್ಲೆಗಳಿಂದ ಬಂದಿರುವ ಮಕ್ಕಳು ಮತ್ತವರ ತಂದೆ ತಾಯಿಗಳು ತಾವು ತಮ್ಮ ಮನೆಯಿಂದ ತಂದಿದ್ದ ರೊಟ್ಟಿ ಚಟ್ನಿಗಳನ್ನು ತಿನ್ನುತ್ತ ಹಳೆಯ ವಿದ್ಯಾರ್ಥಿಗಳ ಸಹಕಾರದೊಂದಿಗೆ ಪೂಜ್ಯ ಶ್ರೀಗಳವರನ್ನು ಭೇಟಿ ಮಾಡಲು ಪ್ರಯತ್ನಿಸುವ ಮಾತುಗಳು, ಸಾಲುಗಟ್ಟಿ ಶ್ರೀಗಳವರ ಕಾರ್ಯಾಲಯದ ಮುಂದೆ ನಿಂತಿರುವ ದೃಶ್ಯ, ಯಾವಾಗ ತಮಗೆ ಕರೆ ಬಂದೀತೋ? ತಮ್ಮ ಆಶೆ ಈಡೇರಿತೋ? ತಮ್ಮನ್ನು ಏನು ಕೇಳುತ್ತಾರೋ? ಎಂಬ ಕುತೂಹಲ ಎಲ್ಲರ ಮನಸಿನಲ್ಲಿ. ಒಬ್ಬೊಬ್ಬರನ್ನೇ ಕರೆದು ಶ್ರೀಗಳು ಪರೀಕ್ಷಿಸುವುದರ ಮೂಲಕ ಪ್ರವೇಶಾದೇಶ. ಅವಕಾಶ ಪಡೆದವರ ಮುಖದಲ್ಲಿ ಎದ್ದು ಕಾಣುವ ಧನ್ಯಭಾವ. ವಿವಿಧ ಶಾಲೆಗಳತ್ತ ಹೆಜ್ಜೆ. ಅಲ್ಲಿನ ಮುಖ್ಯಸ್ಥರ ಅನುಮತಿಯ ಮೇರೆಗೆ ಸೇರಬೇಕಾದ ತರಗತಿಗೆ ಪಾವತಿಸಬೇಕಾದ ಶುಲ್ಕ ಪಾವತಿ, ಆನಂತರ ವಿದ್ಯಾರ್ಥಿಗೆ ಬೇಕಾದ ಸಮವಸ್ತ್ರ ಕೊಳ್ಳುವ ಭರಾಟೆ. ಪುಸ್ತಕಗಳು ನಿತ್ಯೋಪಯೋಗಿ ವಸ್ತುಗಳ ಕೊಳ್ಳುವ ದೃಶ್ಯ. ಸಂಜೆ ಸಾಮೂಹಿಕ ಪ್ರಾರ್ಥನಾ ಸಭೆಯ ಅವಿಸ್ಮರಣೀಯ ಸಭೆ. ಅದೊಂದು ಹೊಸದಾಗಿ ಬಂದವರಿಗೆ ಆಶ್ಚರ್ಯದ ನೋಟ. ಶ್ರೀಗಳವರ ದಿವ್ಯಸಾನ್ನಿಧ್ಯ. ಕಣ್ತುಂಬಿ, ಮನದೊಳಗೆ ನೆಲೆನಿಲ್ಲುವ ದೇವಲೋಕ. ಪ್ರಶಾಂತ ಪವಿತ್ರ ಕ್ಷಣಗಳು. ಸಾವಿರ ಸಾವಿರ ಕೊರಳುಗಳಿಂದ ಹೊರಡುವ ಭಕ್ತಿಗೀತೆಗಳು, ವಚನಗಳು. ಮನಸ್ಸಿಗೆ ನೆಮ್ಮದಿಯನ್ನು ನೀಡುವ ಅನುಪಮ ಮಹಾಮಂಗಳ ಲೋಕ. ಶ್ರೀಗಳವರು ನಡೆಸಿಕೊಂಡು ಬಂದಿರುವ ಮಹಾಪೂಜೆ. ಸಾಮೂಹಿಕ ಪ್ರಾರ್ಥನೆಗಿರುವ ಶಕ್ತಿ ಸಾಮರ್ಥ್ಯವನ್ನು ಪರಿಚಯಿಸುವ ಶ್ರೀಗಳವರ ಆಶೀರ್ವಚನ. ಎಲ್ಲರೂ ಪ್ರಸಾದಕ್ಕಾಗಿ ತೆರಳುವ ದೃಶ್ಯ. ಅವಕಾಶ ಪಡೆದವರ ತೃಪ್ತಿ ತುಂಬಿರುವ ನುಡಿಗಳು. ಹೊಸಬರ ಪರಸ್ಪರ ಪರಿಚಯಾತ್ಮಕ ಸಂಭಾಷಣೆ. ಮಕ್ಕಳನ್ನು ಮಹಾಗುರುವಿನ ಉಡಿಯಲ್ಲಿ ಹಾಕಿ ತಮ್ಮೂರಿಗೆ ಹಿಂತಿರುಗುತ್ತಿರುವ ತಂದೆ ತಾಯಿಗಳ ನಿರುಮ್ಮಳ. ಶ್ರೀಮಠ ಸೇವೆಗಾಗಿ ಎದೆ ತೆರೆದು ಕದ ತೆರೆದು ಬಂದವರನ್ನೆಲ್ಲಾ ಕೈಚಾಚಿ ಕರೆದುಕೊಳ್ಳುವ ಕಾಯಕ ನಡೆದು ಬಂದಿದೆ, ನಡೆಯುತ್ತಲೇ ಬಂದಿದೆ; ನಡೆಯುತ್ತಲೇ ದೇಶ ಕಾಲಗಳನ್ನು ತುಂಬುತ್ತಾ 'ಸದ್ದುಗದ್ದಲವಿರದಸಾಧನೆಯ ಗದ್ದುಗೆ'ಯನ್ನು ಕಟ್ಟುತ್ತಲೇ ನಡೆದಿದೆ.

–ಸಂಪಾದಕ.







## ಹೊಣೆಗಾರಿಕೆ

ಶ್ರೀಮಠಕ್ಕೆ ತಮ್ಮ ಮಕ್ಕಳನ್ನು ಸೇರಿಸುವುದಕ್ಕೆ ರಾಜ್ಯದ ನಾನಾ ಭಾಗಗಳಿಂದ ಪೋಷಕರು, ಪಾಲಕರು, ತಂದೆ ತಾಯಿಗಳು ಆಗಮಿಸುತ್ತಾರೆ. ಅವರ ಸ್ಥಿತಿಗತಿಗಳನ್ನು ಹೇಳಿಕೊಳ್ಳುತ್ತಾರೆ. ತಮ್ಮ ಕಷ್ಟ-ಸಂಕಷ್ಟಗಳು ತಮ್ಮ ಮಕ್ಕಳಿಗೆ ಬರದಿರಲಿ ಎಂದು ಆಶಿಸುತ್ತಾರೆ. ನಾಲ್ಕಕ್ಷರ ಕಲಿತು ಮನೆಗೆ ದಿಕ್ಕಾಗಲಿ, ಮುಪ್ಪಿನಲ್ಲಿ ಆಸರೆಯಾಗಲಿ ಎಂದು ಕನಸು ಕಾಣುತ್ತಾರೆ. ತಮ್ಮಲ್ಲಿದ್ದ ದನಕರುಗಳನ್ನು ಮಾರಿ, ಒಡವೆಗಳನ್ನು ಅಡವಿಟ್ಟು, ಸಿರಿವಂತರ ಮನೆಯಲ್ಲಿ ಕೂಲಿ ಸಂಬಳಕ್ಕಿರುತ್ತೇವೆಂದು ಮಾತು ಕೊಟ್ಟು ಕಿರಿಯ ವಯಸ್ಸಿನ ಕರುಳಕುಡಿಗಳನ್ನು ಕರೆತಂದು ಒಪ್ಪಿಸುತ್ತಾರೆ. ಪ್ರವೇಶ ದೊರೆಯಿತೆಂದ ಮೇಲೆ ಅವರ ಎದೆಭಾರ ಹಗುರವಾದುದನ್ನು ಕಂಡಾಗ ನಮ್ಮ ಜವಾಬ್ದಾರಿಯ ಅರಿವಾಗುತ್ತದೆ. ಅವರ ನಂಬಿಕೆಯನ್ನು ಸಂಸ್ಥೆ ರಕ್ಷಿಸಿಕೊಂಡು ಬರುವುದರತ್ತ ಮನಸ್ಸು ಹೆಜ್ಜೆ ಹಾಕುತ್ತದೆ. ಹಾಗೆ ಪ್ರವೇಶ ಪಡೆದುಕೊಂಡ ಮಕ್ಕಳದೂ ಒಂದೊಂದು ಸಮಸ್ಯೆ. ತಂದೆ ತಾಯಿಗಳನ್ನು ಬಿಟ್ಟಿರಲಾರದ ಮನಸ್ಥಿತಿ ಕೆಲವರದು, ತಂದೆ ತಾಯಿಗಳನ್ನು ಕಳೆದುಕೊಂಡ ಅನಾಥರದು ಮತ್ತೊಂದು ವಿಧದ ಮನಸ್ಸು, ಆಶ್ರಮದ ನಿಯಮಗಳಿಗೆ ಹೊಂದಿಕೊಳ್ಳಬೇಕಾದ ಚಿಂತನೆ, ತಮ್ಮೊಡನಾಡಿಗಳಿಗಿರುವ ಆರ್ಥಿಕಬಲ ತಮಗಿಲ್ಲವಲ್ಲಾ ಎಂಬ ನೋವು, ನಾನೂ ಸಹ ಓದು ಮುಂದೆ ಬರಬೇಕೆಂಬ ಆಸೆ, ತಮ್ಮೂರಿನ ಶಾಲೆಗಿಂತಲೂ ಇಲ್ಲಿರುವ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬ ಸಂಕಲ್ಪ – ನಾನಾ ತರಹದವರಿರುತ್ತಾರೆ. ಅವರಲ್ಲಿ ಕೆಲವರಿಗೆ ಬಟ್ಟೆ ಬರೆಯ ಕೊರತೆ, ಹಾಸಲು ಹೊದಿಯಲು ಇಲ್ಲದ ಸ್ಥಿತಿ, ಪುಸ್ತಕ ಪೆನ್ನುಗಳನ್ನು ಕೊಳ್ಳಲಾರದ ಅಸಹಾಯಕತೆ ಮುಂತಾದ 'ಬಡತನ'ದ ದರ್ಶನವನ್ನು ಕಂಡಾಗ ಸಂಸ್ಥೆಯ ಹೊಣೆಗಾರಿಕೆ ಕಣ್ಮುಂದೆ ನಿಲ್ಲುತ್ತದೆ. 'ಯಾವಾಗಲೂ ಜಾಗರವಿದ್ದು ಸಸಿಯ ಸಲಹಬೇಕು' ಎಂಬ ಅಲ್ಲಮ ಪ್ರಭುಗಳ ವಚನ ನೆನಪಾಗುತ್ತದೆ. ಮಕ್ಕಳನ್ನು ಕಂಡಾಗ ಅವರ ನಗುವನ್ನು ಕಂಡಾಗ ನಮ್ಮ ಹೃದಯ ಹಗುರವಾಗುತ್ತದೆ. ಎಲ್ಲವನ್ನೂ ಗುರುಕೃಪೆ ನಡೆಸುತ್ತಿದೆ ಎಂಬ ಭಾವ ನಮ್ಮದಾಗುತ್ತದೆ.

*

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಸಿರಿಯ ಸೀರೆಯನುಟ್ಟು
ಐವರು ತರುಣಿಯರು ಉರಿಯಪುರುಷನ ನೆರೆಯೆಹೋಗಿ
ಸೀರೆಯ ತೆಗೆಯದೆ ನಾಚಿದರು ನೋಡಾ
ಸೀರೆಯ ಸೀರೆಯನಳಿದು ಉರಿಯ ಪುರುಷನ ನೆರೆಯಲು
ಪರಮಶಿವಯೋಗವಾಯಿತ್ತು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಸತ್ಕ್ರಿಯಾಚಾರವೆಂಬ ಆರಂಬರವ ಪ್ರತಿಷ್ಟಿಸಿಕೊಂಡು ಕ್ರಿಯಾದಿ ಪಂಚಶಕ್ತಿ ಸ್ವರೂಪಾದ ಶರಣನು, ಚಿದಗ್ನಿ ಸ್ವರೂಪವಾದ ಪರಶಿವ ಲಿಂಗದಲ್ಲಿ ಸಮರಸ ಸಂಯೋಗವನೆಸಡುವುದಕ್ಕುದೊಳಗಿಸಿ ಸತ್ಕ್ರಿಯೆಯಿಂದೆ ಲಿಂಗದಲ್ಲಿ ಏಕತ್ವವನೆಯ್ದಿದ ಶರಣಸತಿಗೆ ಭಿನ್ನ ಪ್ರಪಂಚಯೋಗ್ಯವಲ್ಲೆಂದು ಚಿದಭಿಮಾನವ ಮುಂದುಗೊಂಡು ತಿರಸ್ಕರಿಸಿದ.

ಅಂತಪ್ಪ ಚಿದಭಿಮಾನದವ ಮುಂದುಗೊಂಡಿರ್ದ ಶರಣನು, ಸತ್ಕ್ರಿಯಾಚಾರವ ಲಿಂಗದಲ್ಲಿ ನಿಷ್ಪತ್ತಿಯನೆಯ್ದಿಸಿ, ಚಿದಗ್ನಿ ಸ್ವರೂಪಾದ ಪ್ರಾಣಲಿಂಗದಲ್ಲಿ ಸಮರಸ ಸಂಯೋಗವಾಗಲಾಗಿ, ಶರಣಲಿಂಗವೆಂಬ ಭಿನ್ನಭಾವವಳಿದು, ಶಿಖಿಕರ್ಪೂರ ಸಂಯೋಗದಂತೆ ಏಕತ್ವವಾಯಿತ್ತು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ-ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಾತು ಮನಂಗಳಿಗೆ ಮೀರಿದ ತಾತನೆ
ಪ್ರೀತಿಪಮನಗಳಿಗೆ ಓಪನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಉರಿಯ ಚಪ್ಪರವಿಕ್ಕಿ' ಲಿಂಗವನೆಲೆಗೊಳಿಸಿ
ಅರಿವು ಅನುಭಾವವನುಣಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನಿಜವರಿದನಿಶ್ಚಿಂತಮರಣವಗೆಲಿದನ'
ಘನವನೊಳಕೊಂಡ ಪರಿಣಾಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಿಡಿಲು ಶಿವಕಪಿನಿಯೊಳು ಕಾಯಶಾಂತವಗೊಳಿಸಿ
ಮುಡಿಯ ಮಡಿಮಾಡಿ ನಡೆದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಂಜೆ ಭೂಮಿಯನೆಲ್ಲ ಬಂಗಾರವ ಮಾಡಿದ
ಭಕ್ತಿಯ ಬಿತ್ತವ ಬಿತ್ತಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಮವೀರಶೈವಸಮಯಭಾಸ್ಕರಸಮ
ನಿರುಪಮ ನಿರ್ಮಲ ನಿಜಚರಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಮಪಂಚಾಕ್ಷರಿ ಪರಿಪೂರ್ಣ ಶಿವಯೋಗಿ
ಪರಮಾನಂದ ಭರಿತ ಸಹಜನೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭವತಿಮಿರಹರಣನೆ ಭಕ್ತದೇಹಿಕದೇವ
ಶಿವಚರಣ ಸುಂದರ ಅರವಿಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇವರ ಇರುವಿಕೆಯ ನಾನೇನು ಬಲ್ಲೆನು
ನಾ ಬಲ್ಲೆ ನಿಮ್ಮ ಶಿವಚರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ







## ತಾವುಗಳು ಬೋಧಿವೃಕ್ಷ. ತಾವೊಂದು ದೊಡ್ಡಾಲದ ಮರ

(ಪರಮಪೂಜ್ಯರ ಸನ್ನಿಧಾನಕ್ಕೊಂದು 'ಅಕ್ಷರ-ನಮನ')

-ಡಾ॥ ಶ್ರೀ ಶಿವಾನಂದ ಶಿವಾಚಾರ್ಯರು *

102 ವರುಷಗಳನ್ನು ಪೂರೈಸಿ 103ನೆಯ ವರುಷಕ್ಕೆ ಪಾದಾರ್ಪಣೆ ಮಾಡುತ್ತಿರುವ ತಾವುಗಳು ಒಂದು ಬಹುದೊಡ್ಡ ಬೋಧಿವೃಕ್ಷ. ತಾವೊಂದು ದೊಡ್ಡಾಲದ ಮರ!! ಈ ವೃಕ್ಷಕ್ಕೆ ಈಗ 103 ವರುಷಗಳು!! ಈ ಆಲದ ಮರದ ಬೇರುಗಳು ಮತ್ತು ಬಿಳಲುಗಳು 'ಭೂಗರ್ಭ'ವನ್ನು ಮತ್ತು 'ಆಕಾಶಗರ್ಭ'ವನ್ನು ವ್ಯಾಪಿಸಿಕೊಂಡಿವೆ. ಈ ದೊಡ್ಡ ಮರದಲ್ಲಿ ಅಸಂಖ್ಯಾತ ಜೀವಿಗಳು ಆಶ್ರಯ ಪಡೆದು ಕೊಂಡಿವೆ. ಸಹಸ್ರಾರು ಹಕ್ಕಿ-ಪಕ್ಷಿಗಳು ಗೂಡುಕಟ್ಟಿಕೊಂಡಿವೆ. ಅದೆಷ್ಟೋ ಜೀವಿಗಳು ರೆಕ್ಕೆ-ಪುಕ್ಕಗಳು ಬಲಿತಾದ ಮೇಲೆ ಇಲ್ಲಿಂದ ಹಾರಿಹೋಗಿವೆ. ಎಲ್ಲವನ್ನೂ ಈ 'ವಿರಾಟ್‌ವೃಕ್ಷ' ಸಾಕ್ಷಿಯಾಗಿ ನಿಂತುಕೊಂಡು ನೋಡುತ್ತಿದೆ.

ಪರಮಪೂಜ್ಯರೇ, ತಾವು ನೂರು-ನೂರೆರಡು ವರುಷ ಬದುಕಿರುವುದು ಈ ಶತಮಾನದ ಜನಗಳ ಸೋಜಿಗಕ್ಕೆ ಕಾರಣವಾಗಿಲ್ಲ. ಈ ಅಪರ ವಯಸ್ಸಿನಲ್ಲೂ ತಮ್ಮಲ್ಲಿರುವ ಕ್ರಿಯಾಶೀಲತೆ, ಶಿವಪೂಜಾನಿಷ್ಠೆ, ಹತ್ತಾರು ಸಹಸ್ರ ಮಕ್ಕಳನ್ನು ತಾವು ಸುಧಾರಿಸುವ ರೀತಿ, ಲಕ್ಷಾವಧಿ ಭಕ್ತರನ್ನು ತಾವು ಸಮಾಧಾನಿಸುವ ರೀತಿ... ಈ ಎಲ್ಲ ಅಂಶಗಳು ಜನರನ್ನು ಬರೀ ಸೋಜಿಗಕ್ಕಲ್ಲ, ಅತಿಶಯದ ಸೋಜಿಗಕ್ಕೆ ಒಳಗು ಮಾಡಿವೆ. ಈ ಅಸಾಮಾನ್ಯ ಅಂಶಗಳನ್ನು ಗಮನಿಸಿ ಜನಗಳು ತಮ್ಮನ್ನು 'ನಡೆದಾಡುವ ದೇವರೆ'ಂದು ಭಾವಿಸಿದ್ದಾರೆ.

'ಎಲ್ಲೆಡೆಗಳಲ್ಲೂ ಸಿದ್ಧಲಿಂಗನಿದ್ದಾನೆ. ಅವನೆಲ್ಲವನ್ನೂ ನೋಡಿಕೊಳ್ಳುತ್ತಾನೆ' ಎಂಬ ತಮ್ಮ ಅನನ್ಯ ದೈವನಿಷ್ಠೆ ಮತ್ತು ಗುರುಭಕ್ತಿ ತಮ್ಮನ್ನು 'ಜಡ-ಜಂಜಡ'ಗಳಿಂದ ನಿರ್ಲಿಪ್ತವಾಗಿ ಉಳಿಸಿದೆ. 'ದಾನಿಯಾಗಿ ಕೊಡುವವನೂ ಸಿದ್ಧಲಿಂಗ, ಕಳ್ಳನಾಗಿ ಕದಿಯುವವನೂ ಸಿದ್ಧಲಿಂಗ' ಎಂಬ ಭಾವುಕ ಬದುಕು ತಮ್ಮದು. 'ವಿಶ್ವವಿಭೂತಿ' ಬಸವಣ್ಣನಂತೆ ಕಳ್ಳರಲ್ಲೂ, ಸುಳ್ಳರಲ್ಲೂ 'ಕೂಡಲಸಂಗಮ' ನನ್ನೇ ಕಾಣುವ 'ಸಮದರ್ಶಿ'ಗಳು ತಾವು!! ತಮ್ಮಲ್ಲಿರುವ ನಿರ್ಲಿಪ್ತ ಭಾವನೆಯೇ ತಮ್ಮ ದೀರ್ಘಾಯುಷ್ಯದ ಹಿಂದಿರುವ ಪರಮ ರಹಸ್ಯ.

ಇನ್ನೊಂದು ಮಾತು. ಭಾರತೀಯ ಜನಗಳಿಗೆ ಶ್ರೀಮದ್ಭಗವದ್ಗೀತೆಯು ಧರ್ಮಕ್ಷೇತ್ರ ಮತ್ತು ಕುರುಕ್ಷೇತ್ರಗಳನ್ನು ಮಾತ್ರ ಪರಿಚಯಿಸಿತ್ತು. ಭಾರತೀಯ ಜನಮಾನಸಕ್ಕೆ ಅಷ್ಟೊಂದಾಗಿ 'ಅನ್ನಕ್ಷೇತ್ರ'ದ ಪರಿಚಯವಿರಲಿಲ್ಲ. ಭಾರತೀಯ ಜನಗಳಿಗೆಲ್ಲ 'ಅನ್ನಕ್ಷೇತ್ರ'ದ ಪರಿಚಯವನ್ನು ಮಾಡಿಸಿದ ಕೀರ್ತಿ ಖಡಾಖಂಡಿತವಾಗಿಯೂ 'ಸಜೀವ ಭಗವದ್ಗೀತೆ' ಯಂತಿರುವ ತಮ್ಮದು!! ತಾವು ವೀರಶೈವರ ದಾಸೋಹ ತತ್ತ್ವದ ಮೂರ್ತರೂಪ!! ಸಿದ್ಧಗಂಗಾ ಶ್ರೀಕ್ಷೇತ್ರ ವನ್ನು ದಾಸೋಹದ ಪರ್ಯಾಯ ಪದವಾಗಿ ನಿಂತುಕೊಳ್ಳುವಂತೆ ಮಾಡಿದ ಮಹಾನುಭಾವರು ತಾವು. ಸಿದ್ಧಗಂಗೆ ಎಂದರೆ 'ದಾಸೋಹ'! 'ದಾಸೋಹ'ವೆಂದರೆ ಸಿದ್ಧಗಂಗೆ!! ದಾಸೋಹಕ್ಕೂ ಸಿದ್ಧಗಂಗೆಗೂ ಅವಿನಾಭಾವ ಸಂಬಂಧ. 'ವಾಗರ್ಥ'ದಂತೆ ಮತ್ತು 'ಶಿವ-ಶಕ್ತಿ'ಯರಂತೆ!!.

ಒಂದು ಶತಮಾನವನ್ನು ಸಮರ್ಥವಾಗಿ ಪೂರೈಸಿದ ತಾವು ಮತ್ತೊಂದು ಶತಮಾನದಲ್ಲಿ ಯಶಸ್ವಿಯಾಗಿ ಅಡಿಯಿಟ್ಟು ಮತ್ತು ಮಡಿಯುಟ್ಟು ಮುಂದೆ ಸಾಗುತ್ತಿರುವಿರಿ. ಇತಿಹಾಸವನ್ನೇ ರೋಮಾಂಚನಕ್ಕೆ ಒಳಗು ಮಾಡಿದ ತಾವು 'ನಿಯತಿಕೃತನಿಮಯ'ವನ್ನು ಮೀರಿ ನಿಂತು ಕಾಲರಾಯನನ್ನೇ ಆಶ್ಚರ್ಯಕ್ಕೆ ಒಳಗುಮಾಡಿರುವಿರಿ.

ಅಂದಿನ ಮಹಾಭಾರತವು ಕೇವಲ ಹದಿನೆಂಟು ಪರ್ವಗಳಿಗೆ ಸಾಕ್ಷಿಯಾಗಿ ನಿಂತುಕೊಂಡಿದ್ದರೆ ಇಂದಿನ ನವಭಾರತವು 'ಸಿದ್ಧಗಂಗಾಪರ್ವ' ಅಥವಾ 'ಶ್ರೀ ಶಿವಕುಮಾರ ಪರ್ವ' ಎಂಬ ಇನ್ನೊಂದು ಪರ್ವವನ್ನು ಸೇರಿಸಿಕೊಳ್ಳಲೇ ಬೇಕಾದ ಅನಿವಾರ್ಯತೆಗೆ ವಸ್ತುವಾಗಿ ನಿಂತುಕೊಂಡಿದೆ. ಅಂಥ ಒಂದು ಅನಿವಾರ್ಯತೆಯನ್ನು ಸೃಷ್ಟಿಸಿದುದರ ಎಲ್ಲ ಶ್ರೇಯಸ್ಸು ತಮ್ಮ 'ಕೀರ್ತಿ-ಜೋಳಿಗೆ' ಯನ್ನು ಸೇರಿಕೊಳ್ಳುತ್ತದೆ. ತಮಗೆ ಇನ್ನೊಮ್ಮೆ ನಮ್ಮ ಅಕ್ಷರರೂಪೀ ನಮನಗಳನ್ನು ಸಲ್ಲಿಸುತ್ತ ವಿರಮಿಸುತ್ತೇವೆ. ❑

* ಹಿರೇಮಠ, ತುಮಕೂರು.



# ಸುಖ

-ಎಚ್.ಎಸ್. ಸಿದ್ಧಗಂಗಪ್ಪ *

'ಸುಖ' ಎನ್ನುವುದು ಮಾರಾಟದ ವಸ್ತುವಲ್ಲ. ಅದು ಅನುಭವ ವೇದ್ಯವಾದುದು. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸುಖ ಕಾಣುತ್ತಾರೆ. ಅದು ಅವರವರ ಆಸಕ್ತಿ, ಅಭಿರುಚಿಯನ್ನು ಅವಲಂಬಿಸುತ್ತದೆ. ಯಾವುದು ಮನಸ್ಸಿಗೆ ಸಂತೋಷ ಉಲ್ಲಾಸವನ್ನು ಕೊಡುತ್ತದೆಯೋ ಅದು ಸುಖ. ಸುಖವಾಗಿರುವುದೆಂದರೆ ಒಂದು ಮಾನಸಿಕ ಸ್ಥಿತಿ. ಯಾರಿಗೆ ಯಾವುದರಿಂದ ಸುಖ ದೊರೆಯುತ್ತದೆ ಎಂಬುದನ್ನು ಮೂರನೆಯವರು ಹೇಳಲು ಬರುವುದಿಲ್ಲ. ಸಿರಿವಂತಿಕೆ, ಭೋಗ ಜೀವನವನ್ನು ಕೆಲವರು ಸುಖದೊಡನೆ ಸಮೀಕರಿಸ ಬಹುದು. ಕಾರು, ಮನೆ, ಟಿ.ವಿ. ಡಿ.ವಿ.ಡಿ, ರೆಫ್ರಿಜಿರೇಟರ್ ಮೊದಲಾದುವನ್ನು ಕೆಲವರು ಸುಖವೆಂದು ಭ್ರಮಿಸಬಹುದು. ಕೆಲವರು ಒಳ್ಳೆಯ ಉಡುಗೆ ತೊಡುವುದರಲ್ಲೇ ಸುಖ ಕಾಣುತ್ತಾರೆ. ಒಳ್ಳೆಯ ಸಂಗೀತ ಕೇಳುವುದರಲ್ಲಿ, ಚಿತ್ರ ನೋಡುವುದರಲ್ಲಿ ಚಿತ್ರ ರಚಿಸುವುದರಲ್ಲಿ ಕೆಲವರು ಸುಖವನ್ನು ಕಂಡರೆ ಮತ್ತೆ ಕೆಲವರಿಗೆ ಸೊಗಸಾದ ಊಟ ತಿಂಡಿಗಳಿಂದಲೇ ಸುಖ.

ಒಬ್ಬನು ಸುಖವನ್ನು ಅರಸಿಕೊಂಡು ಹೋಗುತ್ತಿದ್ದನಂತೆ. ಕಂಡಕಂಡವರನ್ನೆಲ್ಲ 'ಸುಖ ಎಲ್ಲಿ ಸಿಗುತ್ತದೆ'? ಎಂದು ಕೇಳುತ್ತಿದ್ದನಂತೆ. ಸುಖವನ್ನು ಕಂಡವರು ಅವನಿಗೆ ಯಾರೂ ದೊರೆಯಲಿಲ್ಲ. ಕೊನೆಗೆ ಒಬ್ಬ ಜಾಣ ಹೇಳಿದನಂತೆ. 'ಸುಖವೇ? ಅದು ನಿನ್ನ ಮನಸ್ಸಿನಲ್ಲೇ ಇದೆ' ಎಂದನಂತೆ. ಸುಖವನ್ನು ಅರಸಿಕೊಂಡು ಹೋಗುವವರಿಗೆ ಅದು ಮರೀಚಿಕೆ; ಸುಖ ಪಡುವವರಿಗೆ ಮಾತ್ರ ಕೈಯಲ್ಲೇ ಇರುತ್ತದೆ. ವಿಶಾಲವಾದ ಹುಲ್ಲುಗಾವಲು, ಕೈಯಲ್ಲೊಂದು ಪುಸ್ತಕ. ಜೊತೆಯಲ್ಲಿಬ್ಬರು ಸ್ನೇಹಿತರು. ಒಂದು ಮಡಿಕೆ ಹೆಂಡ, ಇಷ್ಟಿದ್ದರೆ ಸ್ವರ್ಗ ಯಾಕೆ ಬೇಕು ಎಂದು ಒಂದು ಪರ್ಷಿಯನ್ ಕವಿತೆ ಹೇಳುತ್ತದೆ.

ಕವಿ ನೇಮಿಚಂದ್ರ ತನ್ನ ಕಾವ್ಯದಲ್ಲಿ 'ಪೆಂಡಿರೊಳಿಲ್ಲದಿಲ್ಲ ಸುಖಮೆಲ್ಲಿಯಂ' ಎಂಬ ಉಕ್ತಿಯನ್ನು ಬಳಸಿದ್ದಾನೆ. ಸ್ತ್ರೀಯರಲ್ಲದೆ ಸುಖ ಮತ್ತೆಲ್ಲಿಯೂ ಇಲ್ಲ ಎಂಬುದು ಈ ಉಕ್ತಿಯ ಅರ್ಥ. ಒಂದು ಸ್ತ್ರೀಯರೇ ಸುಖದ ಆಕರವೆಂದರೆ ಮತ್ತೊಂದು ಭಕ್ತಿ ಸುಖ ಅನನ್ಯವೆನಿಸುತ್ತದೆ. ಒಂದು ಸಂಸಾರದಲ್ಲಿ ಸುಖವಿದೆ ಎಂದರೆ ಮತ್ತೊಂದು 'ಸಂನ್ಯಾಸ'ದಲ್ಲಿ ಸುಖವಿದೆ ಎನ್ನುತ್ತದೆ. ಇವುಗಳಲ್ಲಿ ಸತ್ಯ ಯಾವುದು ಎಂದು ತೀರ್ಮಾನಿಸುವುದು ಸುಲಭವಲ್ಲ. ಸಂಸಾರ ಭಕ್ತಿ ಎರಡನ್ನು ನೋಡಿದಾಗ 'ಇತ್ತದರಿ, ಅತ್ತಪುಲಿ' ಎಂಬ ಸಂದಿಗ್ಧತೆ ಉಂಟಾಗುವುದು ಸಹಜ. ಆದರೆ ಇವರೆಡನ್ನು ಸಮನ್ವಯಗೊಳಿಸಿಕೊಂಡು, ಉಳಿಸಿಕೊಂಡು ಸುಖವನ್ನು ಸಾಧಿಸಬಹುದು.

ಭಾಮಿನೀ ವಿಲಾಸದಲ್ಲಿ ಒಂದು ಸೂಕ್ತಿ ಬರುತ್ತದೆ. 'ಸುಖ ಉಂಟಾದಾಗ ಸೇವಿಸಬೇಕು. ಹಾಗೆಯೇ ದುಃಖವಾದಾಗಲೂ ಅನುಭವಿಸಬೇಕು. ದುಃಖ-ಸುಖಗಳೆರಡೂ ಗಾಲಿಯಂತೆ ತಿರುಗುತ್ತಿರುತ್ತದೆ. ಒಮ್ಮೆ ದುಃಖ ಬಂದರೆ, ಇನ್ನೊಮ್ಮೆ ಸುಖ. ಹೀಗೆ ಮನುಷ್ಯನು ನಿರಾಸಕ್ತನಾಗಲು ಕಲಿಯಬೇಕು. ಈ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಂಡು ಮನಸ್ಥಿತಿಯನ್ನು ಸಮತೋಲನವಾಗಿ ಕಾಪಾಡಿಕೊಂಡಾಗ 'ಸುಖ'ದ ಅನುಭವವಾಗುತ್ತದೆ. ಬೇವನ್ನು ತಿಂದು ಬೆಲ್ಲವನ್ನು ಸವಿದಾಗ ಬೆಲ್ಲದ ರುಚಿಯ ಅರಿವಾಗುತ್ತದೆ. ಬೆಲ್ಲದ ಸ್ವಾದದ ಅನುಭವವಾಗಬೇಕಾದರೆ ಬೇವಿನ ಕಹಿಯ ರುಚಿಯನ್ನು ನೋಡಬೇಕು.

ಮನುಷ್ಯ ಸಂಸಾರದಲ್ಲಿದ್ದುಕೊಂಡು ಅದರ ಸವಿಗೆ ಮುಖ ತಿರುಗಿಸದೆ ಪರಮಾತ್ಮ, ಪರಮಾರ್ಥಗಳನ್ನು ಮರೆಯದೆ ಭಕ್ತಿಯ ಸುಖಕ್ಕೂ ಭಾಜನವಾಗುವುದು ಸಾಧ್ಯ. ಅಂಥ ಸಾಮರಸ್ಯದಿಂದ ಸಂಸಾರಕ್ಕೆ ರಕ್ಷೆ, ಭಕ್ತಿಗೆ ಸರಸತೆ. □

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.







# ಶರಣ ವಿಚಾರಧಾರೆ

-ಪ್ರೊ. ಡಿ. ಜವರೇಗೌಡ *

ಈ ಮಹಾ ಸಮ್ಮೇಳನದ ಸಮಾರೋಪ ಸಮಾರಂಭದಲ್ಲಿ ನಾನು ಭಾಷಣ ಮಾಡಬೇಕು ಎಂಬುದಾಗಿ ಪ್ರಾಯಶಃ ಪೂಜ್ಯ ಮಹಾಸ್ವಾಮಿಗಳವರ ಆಜ್ಞೆಯ ಮೇರೆಗೆ ನನ್ನ ಮಾನ್ಯ ಮಿತ್ರರಾದ ಡಾ॥ ತಿಪ್ಪೇರುದ್ರಸ್ವಾಮಿಯವರು ಕೇಳಿದಾಗ ನಾನು ಸಂಕೋಚದಿಂದ, ಭೀತಿಯಿಂದ ಒಪ್ಪಿಕೊಂಡಿದ್ದೇನೆ. ಏಕೆಂದರೆ ಈ ಸಮ್ಮೇಳನದಿಂದ, ಭಾಗವಹಿಸತಕ್ಕಂತಹವರು ಎಲ್ಲರೂ ಕೂಡ ದೊಡ್ಡ ದೊಡ್ಡ ವಿದ್ವಾಂಸರು, ಶರಣ ಸಾಹಿತ್ಯದಲ್ಲಿ ತುಂಬಾ ಸಂಶೋಧನೆಯನ್ನು ಮಾಡಿರತಕ್ಕಂತಹವರು, ಬಹಳ ಪಾಂಡಿತ್ಯವನ್ನು ಸಂಪಾದನೆ ಮಾಡಿರತಕ್ಕಂತಹವರು ; ಅಂತೂ ಒಂದಲ್ಲ ಒಂದು ರೀತಿಯಲ್ಲಿ ನಮ್ಮ ಮಲ್ಲೇದೇವರು ಹೇಳುತ್ತಾ ಇದ್ದರು, ನಾನು ಸವ್ಯಸಾಚಿ ಅಂತ. ಸವ್ಯಸಾಚಿಯಲ್ಲ, 'ಜಾಕ್ ಆಫ್ ಆಲ್ ಟ್ರೇಡ್ಸ್ ಮಾಸ್ಟರ್ ಆಫ್ ನನ್' ಎಲ್ಲ ಕಡೆಯೂ ಕೈ ಹಾಕುವುದು, ಎಲ್ಲೂ ಕೂಡ ಯಶಸ್ಸು ದೊರೆಯುವ ಹಾಗಿಲ್ಲ. ಈ ತರಹದ ಪ್ರವೃತ್ತಿ ಇರತಕ್ಕಂತಹವನು ನಾನು. ಆದರೆ ಒಂದು ಮಾತು ನಿಜ, ಬಸವಣ್ಣನವರ ಅನುಯಾಯಿ ಆಗಬಲ್ಲೆನೆಂಬ ವಿಶ್ವಾಸವುಳ್ಳವನು. ಅದು ಏಕೆ ಎನ್ನುವುದನ್ನು ನಾನು ಮುಂದೆ ಹೇಳುತ್ತೇನೆ. ಆದರೆ ಮಹಾಸ್ವಾಮಿಯವರು 'ಇವನಾರವ, ಇವನಾರವ' ಎನ್ನದೆ 'ಇವನಮ್ಮವ, ಇವನಮ್ಮವ' ಎಂಬುದಾಗಿ ಇಲ್ಲಿಗೆ ಕರೆದಿರುವುದಕ್ಕಾಗಿ ಅವರನ್ನೂ, ಡಾ. ತಿಪ್ಪೇರುದ್ರಸ್ವಾಮಿಯವರನ್ನೂ ವಂದಿಸುತ್ತೇನೆ.

ಈ ಸಮ್ಮೇಳನ ಮೊದಲನೆಯದು ಎಂಬುದಾಗಿ ಪ್ರಕಟವಾಗಿದೆ. ಮಾನ್ಯ ಜತ್ತಿಯವರು ಒಪ್ಪುತ್ತಾರೋ, ಇಲ್ಲವೋ ಗೊತ್ತಿಲ್ಲ; ನನಗನ್ನಿಸುತ್ತದೆ ಇದು ೮೫೦ ವರ್ಷಗಳಷ್ಟು ಹಳೆಯದು. ೮೫೦ ವರ್ಷದ ಹಿಂದೆ ಯಾವ ಅನುಭವ ಮಂಟಪ ಸಂಸ್ಥಾಪಿತವಾಗಿತ್ತೋ, ಯಾವ ಅನುಭವ ಮಂಟಪದಲ್ಲಿ ಶರಣ ಶರಣೆಯರು ಇದ್ದರೋ ಅದು 'ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ'. ಇದು 'ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ' ಅಂದರೆ ಕೊಶ್ಚನ್ ಮಾರ್ಕ್ ಹಾಕಬೇಕು. ಅವತ್ತಂತೂ ಕಾಶ್ಮೀರದಿಂದ, ಗುಜರಾತಿನಿಂದ, ಈ ಭರತಖಂಡದ ಎಲ್ಲ ದಿಕ್ಕುಗಳಿಂದಲೂ ಬಂದಿರ ತಕ್ಕಂತಹ ಶರಣರು ಆ ಅನುಭವ ಮಂಟಪದಲ್ಲಿ ಸೇರಿ ಸಾಹಿತ್ಯದ ಬಗ್ಗೆ, ವಚನಗಳ ಬಗ್ಗೆ, ವೀರಶೈವದ ಬಗ್ಗೆ, ಲಿಂಗ, ಜಂಗಮ, ಗುರು ಇವುಗಳ ಬಗ್ಗೆ ಕೂಲಂಕಷವಾಗಿ ಚರ್ಚೆ ನಡೆಸುತ್ತಿದ್ದ ಒಂದು ಚಿತ್ರವನ್ನು ನಾವು ನಮ್ಮ ಕಣ್ಣು ಮುಂದೆ ಇಟ್ಟುಕೊಳ್ಳಬಹುದು ಎಂದು ಕಾಣಿಸುತ್ತದೆ.

ಇಂದಿನ ಈ ಸಮ್ಮೇಳನ ಮಹತ್ವಪೂರ್ಣವಾದಂತಹ ಮತ್ತು ಐತಿಹಾಸಿಕವಾದಂತಹ ಸಮ್ಮೇಳನ ನಿಜ. ಏಕೆಂದರೆ ೧೦೦ ವರ್ಷಗಳ ಮೇಲೆ, ಈ ಸಮ್ಮೇಳನದ ಮಹತ್ವ ಏನು ಅನ್ನುವುದು ಗೊತ್ತಾಗುತ್ತದೆ. ಇವತ್ತು ಇಲ್ಲಿ ಭಾಗವಹಿಸಿರತಕ್ಕಂತಹವರು ನಿಜಕ್ಕೂ ಪುಣ್ಯ ಶಾಲಿಗಳು. ಪ್ರಾಯಶಃ ಈ ಸಮ್ಮೇಳನದಲ್ಲಿ ಅವರು ಸೂಕ್ಷ್ಮ ಶರೀರಿಯಾಗಿ ಈ ಇಡೀ ಸಭಾಂಗಣದಲ್ಲೆಲ್ಲ ಆವರಿಸಿಕೊಂಡಿದ್ದಾರೆ ಎಂಬುದು ನನ್ನ ಭಾವನೆ. ಅವರ ಪ್ರತೀಕವಾಗಿ ನೂತನ ಸ್ವಾಮಿಗಳವರು ಇಲ್ಲಿದ್ದಾರೆ ಎಂದು ನನಗಾದರೂ ಅನ್ನಿಸುತ್ತದೆ. ತಿಪ್ಪೇರುದ್ರಸ್ವಾಮಿಯವರಿಗೆ ಹೇಳಿದೆ, ನನ್ನನ್ನು ಬಿಟ್ಟುಬಿಡಿ ಅಂತ. ಆದರೆ ನನಗೆ ಅನ್ನಿಸಿತು ಆಮೇಲೆ, ಎಂತಹ ಅನ್ಯಾಯವನ್ನು ನನಗೆ ನಾನೇ ಮಾಡಿಕೊಳ್ಳುತ್ತಿದ್ದೆ, ಆಕಸ್ಮಾತ್ ಅಷ್ಟೇ ಸಾಕು ಅಂತ ನನ್ನನ್ನು ಬಿಟ್ಟಿದ್ದರೆ ! ಅವರು ಬಿಡುವಂತಹವರಲ್ಲ. ಆಮೇಲೆ ನನಗೆ ಹೆಮ್ಮೆಯಾಯಿತು, ಆನಂದವಾಯಿತು. ೧೦೦ ವರ್ಷಗಳ ಮೇಲಾದರೂ ಕೂಡ, ಯಾವುದಾದರೂ ಒಂದು ಪುಸ್ತಕದಲ್ಲಿ ಇವನು ಮುಖ್ಯ ಅತಿಥಿಯಾಗಿ ಇಲ್ಲಿಗೆ ಬಂದಿದ್ದ ಅಂತ ಬಂದೇ ಬರುತ್ತದೆ. ಆದರೆ ನಾನು ಬಸವಣ್ಣನವರು ಹೇಳಿರತಕ್ಕಂತಹ ಅಥವಾ ಇತರ ಶರಣರು ಹೇಳಿರತಕ್ಕಂತಹ ಶರಣ ಎಂಬತಕ್ಕ ಮಾತಿಗೆ ಎಷ್ಟು ಅರ್ಹನೋ ಗೊತ್ತಿಲ್ಲ.

* ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಿನ್ನೆ ದಿವಸ ನಾನೊಂದು ಗೋಷ್ಠಿಯಲ್ಲಿ ಶ್ರೋತೃವಾಗಿ ಭಾಗವಹಿಸಿದ್ದೆ. ಆ ಗೋಷ್ಠಿಯಲ್ಲಿ ಮಂಡಿತವಾದಂತಹ ಅನೇಕ ಪ್ರಬಂಧಗಳು ತುಂಬಾ ಚೆನ್ನಾಗಿದ್ದವು. ಇವತ್ತು ಹೇಗಿದ್ದಿರಬೇಕು ಎಂದು ನಾನು ಭಾವಿಸಿಕೊಂಡಿದ್ದೇನೆ. ಆ ಸಮಯದಲ್ಲಿ ತಿಪ್ಪೇರುದ್ರಸ್ವಾಮಿಯವರು ಒಂದು ಮಾತನ್ನು ಎತ್ತಿದರು. ಇತರರೂ ಆ ಮಾತಿನ ಬಗ್ಗೆ ಪ್ರಸ್ತಾಪ ಮಾಡಿದರು. ಕನ್ನಡ ಸಾಹಿತ್ಯ ಸಮ್ಮೇಳನ ಇರತಕ್ಕಂತಹ ಸಂದರ್ಭದಲ್ಲಿ ಅಥವಾ ಪರಿಷತ್ತು ಇರತಕ್ಕಂತಹ ಸಂದರ್ಭ ದಲ್ಲಿ ಶರಣ ಸಾಹಿತ್ಯ ಪರಿಷತ್ತಿಗೆ ಏನು ಔಚಿತ್ಯ ಇದೆ ಎಂಬುದಾಗಿ ಕೆಲವರು ಸಂದೇಹವನ್ನು ಸೂಚಿಸಿದ್ದಾರೆ. ಆ ಬಗ್ಗೆ ಉತ್ತರವನ್ನೂ ಕೂಡ ಕೊಟ್ಟಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಇನ್ನೂ ಒಂದೆರಡು ಇರಬಹುದು, ಬೇರೆ ರೂಪದಲ್ಲಿ, ಈಗಿರತಕ್ಕಂತಹ ಪರಿಷತ್ತಿನ ಜೊತೆಗೆ.

ಕರ್ನಾಟಕ ದೊಡ್ಡದು. ನಾನಾ ರೀತಿಯ ಪರಿಷತ್ತುಗಳು ಇವತ್ತು ಬೇಕಾಗುತ್ತವೆ. ಒಂದು ಪರಿಷತ್ತು ಎಲ್ಲ ಸಾಧ್ಯತೆಗಳನ್ನು ಸಾಧಿಸುತ್ತದೆ ಎಂದು ನಾನು ಅಂದುಕೊಂಡಿಲ್ಲ. ಎಲ್ಲರ ಆಸೆ ಆಕಾಂಕ್ಷೆಗಳನ್ನು ನೆರವೇರಿಸುತ್ತದೆ ಎಂದು ನಾನು ಅಂದು ಕೊಂಡಿಲ್ಲ. ಶರಣ ಸಾಹಿತ್ಯ ಇಡೀ ಕನ್ನಡ ಸಾಹಿತ್ಯ ದಲ್ಲಿ ಅತ್ಯಂತ ವಿಶಿಷ್ಟವಾಗಿರತಕ್ಕಂಥದ್ದು. ಆ ಶರಣ ಸಾಹಿತ್ಯ ಸಾಹಿತ್ಯ ಉಗಮಗೊಳ್ಳದೆ ಇದ್ದ ಪಕ್ಷದಲ್ಲಿ, ಅದು ಬೆಳೆಯದೆ ಇದ್ದ ಪಕ್ಷದಲ್ಲಿ ಕನ್ನಡ ಸಾಹಿತ್ಯ ಬರಡಾಗುತ್ತಿತ್ತು. ಮುಂದೆ ಕನ್ನಡ ಸಾಹಿತ್ಯ ವಿವಿಧ ಮುಖವಾಗಿ ಬೆಳೆದಂತಹ ಸಂದರ್ಭ ದಲ್ಲಿ, ಸ್ಫೂರ್ತಿಯಿಂದ, ಕಸುವಿನಿಂದ, ಶಕ್ತಿಯಿಂದ ಬೆಳೆದಂತಹ ಸಂದರ್ಭದಲ್ಲಿ ಶರಣ ಸಾಹಿತ್ಯ ತುಂಬಾ ಪರಿಣಾಮಕಾರಿಯಾ ದಂತಹ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ಯಾರೂ ಮರೆಯುವಂತಿಲ್ಲ. ಹರಿಹರ, ರಾಘವಾಂಕ ಅವರೆಲ್ಲರೂ ಕೂಡ ಈ ಶರಣ ಸಾಹಿತ್ಯದ ಶಿಶುಗಳು; ಬಸವಾದಿ ಪ್ರಮಥರ ಶಿಶುಗಳು; ಮಾನಸ ಶಿಶುಗಳು ಅವರು. ಇವತ್ತು ಮನುಷ್ಯ ನನ್ನು ಹೊಗಳುವುದು ಬೇಡ. ರಾಜರ ಮೇಲೆ ಕಾವ್ಯವನ್ನು ಕಟ್ಟಿ ಇಂದ್ರ, ಚಂದ್ರ, ದೇವೇಂದ್ರ ಎಂಬುದಾಗಿ ಹೇಳುವುದು ಬೇಡ. ಇತ್ಯಾದಿ, ಇತ್ಯಾದಿಯಾಗಿ ಹೇಳಿಕೊಟ್ಟವರು ಯಾರು? ಶರಣರು, ಬಸವಣ್ಣನವರು.

ಶರಣ ಸಾಹಿತ್ಯ ಇತರ ಸಾಹಿತ್ಯಗಳಂತೆ ಅಲ್ಲ. ಇದು ವೈದಿಕ ಧರ್ಮಗಳ ನ್ಯೂನತೆಯನ್ನು, ಕರ್ಮಕಾಂಡವನ್ನು, ಹಿಂಸಾಚಾರವನ್ನು ಸಂಪೂರ್ಣವಾಗಿ ಕಿತ್ತೊಗೆದಂತಹ ಸಾಹಿತ್ಯ. ನಾನು ಬಂದಾಗ ವೇದಿಕೆಯಿಂದ ಮಿತ್ರರೊಬ್ಬರು ಹೇಳುತ್ತಿದ್ದರು; ಇದು ಕಲೆಗಾಗಿ ಕಲೆ ಎಂದು ರಚಿತವಾದು ದಲ್ಲ; ಇದು ಬದುಕಿನ ಒಂದು ರೀತಿ; ಬದುಕಿನ ಒಂದು ಸಾರಸರ್ವಸ್ವವೇ ಈ ಶರಣ ಸಾಹಿತ್ಯದಲ್ಲಿ ಹೆಪ್ಪುಗಟ್ಟಿದೆ ಎಂದು. ದೇವರು, ಮೋಕ್ಷ ಇವೆಲ್ಲ ಯಾವುದೋ ಒಂದು ಪ್ರತಿಷ್ಠಿತ ವರ್ಗಕ್ಕೆ ಸೀಮಿತ ಆಗಿದ್ದುದನ್ನು ಸಾಮಾನ್ಯ ಜನಕ್ಕೆ, ದಲಿತ ವರ್ಗದ ತನಕ, ರೈತನ ತನಕ, ಕೂಲಿಕಾರನ ತನಕ, ಮೇದರ ತನಕ ತಂದುಕೊಟ್ಟಂತಹ ಸಾಹಿತ್ಯ ಇದು. ಶರಣ ಸಾಹಿತ್ಯ. ಇದು ವೈರಾಗ್ಯ ಸಾಹಿತ್ಯವಲ್ಲ. ಬಸವಣ್ಣನವರು ಸಂಸಾರವಂದಿಗರಾಗಿದ್ದರು. ಬಸವಣ್ಣ ನವರು ಬರಿಯ ವೈರಾಗ್ಯವನ್ನು ಬೋಧಿಸಲಿಕ್ಕೆ, ವೇದಾಂತ ವನ್ನು ಬೋಧಿಸಲಿಕ್ಕೆ ಅಥವಾ ಗುಹೆಗೆ ಹೋಗಿ ಕುಳಿತುಕೊಂಡು ಮೂಗನ್ನು ಹಿಡಿದುಕೊಂಡು ತಪಸ್ಸನ್ನು ಮಾಡಲಿಕ್ಕೆಂದೂ ಹೇಳಲಿಲ್ಲ. ಈ ಪ್ರಪಂಚದಲ್ಲಿದ್ದುಕೊಂಡು, ಸಂತೆಯಲ್ಲಿದ್ದುಕೊಂಡು, ಈ ಸಮುದ್ರದ ದಡದಲ್ಲಿದ್ದು ಕೊಂಡು ತಪಸ್ಸನ್ನು ಮಾಡ ತಕ್ಕಂಥದ್ದು. ಹಿಮಾಲಯದ ಗುಹೆಯಲ್ಲಿದ್ದುಕೊಂಡು ಇದನ್ನೆಲ್ಲ ಮಾಡುವುದು ಸುಲಭ. ಆದರೆ ಈ ಶರೀರಕ್ಕೆ ಅಷ್ಟೇಕೆ ವೇದನೆ ಕೊಡಬೇಕು? ತ್ರಾಸ ಕೊಡಬೇಕು? ಎನ್ನತಕ್ಕಂಥದ್ದನ್ನು ಶರಣರು ಕೇಳುತ್ತಾರೆ, ಏಕೆ? ಅದು ಕೇವಲ ತಾತ್ವಿಕವಾಗಿ ಹೇಳತಕ್ಕಂಥ ಮಾತಲ್ಲ. ಒಬ್ಬ ಶರಣ ಹೇಳುತ್ತಾನೆ. 'ಎನ್ನಂಗದಲ್ಲಿ ನಿನಗೆ ಮಜ್ಜನ, ಎನ್ನ ನಾಸಿಕದಲ್ಲಿ ನಿನಗೆ ಗಂಧ 'ನನ್ನ ತುರುಬಿನಲ್ಲಿ ನಿನ್ನ ಕುಸುಮ ಪೂಜೆ' ಎಂದು. ಇನ್ನೊಬ್ಬ ಶಿವಶರಣ, 'ರಸವನರಿಯುವುದಕ್ಕೆ ನೀನು ಜಿಹ್ವೆಯಾಗಿ ಬಂದೆ, ಗಂಧವನರಿಯುವುದಕ್ಕೆ ನೀನು ನಾಸಿಕ ವಾಗಿ ಬಂದೆ' ಇತ್ಯಾದಿಗಾಗಿ ಹೇಳುತ್ತಾನೆ. ಎಂತಹ ದೊಡ್ಡ ಮಾತು! ಅದನ್ನು ನಾನು ಯಾವ ಸಾಹಿತ್ಯದಲ್ಲೂ, ವೇದಾಂತ ದಲ್ಲೂ ನೋಡಿಲ್ಲ. ಅಂದರೆ ನಮ್ಮ ದೇಹದ ಪ್ರತಿಯೊಂದು ಅಂಗವೂ ಕೂಡ ಶಿವನ ಒಂದು ಆವಾಸಸ್ಥಾನ. ಪ್ರತಿಯೊಂದು ಅಂಗವೂ, ಕಣ್ಣು, ಕಿವಿ, ಮೂಗು ಎಲ್ಲವೂ. ನಿಜಕ್ಕೂ ಅದನ್ನು ನಾನು ಅನುಭವಿಸುವ ಪಕ್ಷಕ್ಕೆ, ಆಗ ಲಿಂಗಾಂಗ ಸಾಮರಸ್ಯ ನಮಗೂ ಸುಲಭ.





ಬರೀ ಬಸವಣ್ಣ ನವರಿಗೆ ಮಾತ್ರವಲ್ಲ, ಎಲ್ಲರಿಗೂ ಸುಲಭ ಎಂದು ನನಗನ್ನಿಸುತ್ತದೆ. ಒಳಗೂ ಪೂಜೆ, ಹೊರಗೂ ಪೂಜೆ; ನಾವು ಒಳಗೂ ಇಲ್ಲ ಹೊರಗೂ ಇಲ್ಲ.

ನಾವು ಏನು ಕೆಲಸ ಮಾಡುತ್ತೇವೆ ಅದೆಲ್ಲವನ್ನೂ ಕೂಡ ಶಿವನಿಗೆ ಅರ್ಪಿಸಿದ ಪಕ್ಷದಲ್ಲಿ ಅದು ಕಾಯಕ. ಕಾಯಕ ಸಿದ್ಧಾಂತದ ಬಗ್ಗೆ ವ್ಯಾಖ್ಯಾನ ಬೇಕಾಗಿದ್ದರೆ ಹತ್ತು ದಿವಸ ಮಾಡಬಹುದು ಎಂದು ಅನ್ನಿಸುತ್ತದೆ. ಅದರ ಆಧ್ಯಾತ್ಮಿಕ ನಿಲುವು ಏನು ? ಧಾರ್ಮಿಕ ವಿಷಯಗಳು ಏನು ? ಧಾರ್ಮಿಕ ಅರ್ಥಗಳು ಏನು ? ಸಾಮಾಜಿಕ ಅರ್ಥವೇನು? ಒಂದಲ್ಲ, ಎರಡಲ್ಲ, ಮೂರಲ್ಲ. ಗೀತೆಯಲ್ಲಿ ಹೇಳುವ ನಿಷ್ಕಾಮಯೋಗ ಬಹಳ ಮಹತ್ವವಾಗಿರತಕ್ಕಂಥದ್ದು ನಿಜ. ಆದರೆ ಈ ಕಾಯಕ ತತ್ವ ಎಲ್ಲಕ್ಕಿಂತಲೂ ಮಹತ್ವವಾಗಿರ ತಕ್ಕಂಥದ್ದು. ಕಾಯಕನಿರತನಾದರೆ ಗುರುವನ್ನು ಮರೆಯ ಬಹುದು ಎಂದು ಇಂಥ ಸ್ಥಾನವನ್ನು ಕಾಯಕಕ್ಕೆ ಶರಣರು ಕೊಟ್ಟರು. ನಿನ್ನೆ ಅದನ್ನು ಬಹಳ ಚೆನ್ನಾಗಿ ವಿವರಿಸಿದ್ದಾರೆ. ಈ ಪ್ರಪಂಚದಲ್ಲಿ ಅಥವಾ ಇಂಡಿಯಾ ದೇಶದಲ್ಲಿ ಈ ಕಾಯಕ, ದಾಸೋಹ ಎರಡನ್ನೂ ನಡೆಸಿದ ಪಕ್ಷದಲ್ಲಿ ಬಡತನ ಖಂಡಿತವಾಗಿಯೂ ಇರುತ್ತಿರಲಿಲ್ಲ. ಇಂತಹ ಕಾಯಕ ತತ್ವವನ್ನು ಕೊಟ್ಟ ಸಾಹಿತ್ಯ ಬರೀ ರಂಜನೀಯ ಸಾಹಿತ್ಯವಲ್ಲ, ಮನಸ್ಸನ್ನು ಕ್ಷುಭಿತಗೊಳಿಸುವಂತಹ ಸಾಹಿತ್ಯವಲ್ಲ, ಇದು ಹೃದಯವನ್ನು ಕಲಕತಕ್ಕಂತಹ ಸಾಹಿತ್ಯವಲ್ಲ. ಇಡೀ ಬದುಕನ್ನೇ ಉದಾತ್ತಗೊಳಿಸತಕ್ಕಂತಹ, ಉತ್ತಮಗೊಳಿಸ ತಕ್ಕಂತಹ, ಕೈಲಾಸಗೊಳಿಸತಕ್ಕಂತಹ ಸಾಹಿತ್ಯ.

ಇದು ಸ್ಥಾವರಲಿಂಗ ಪೂಜೆಯನ್ನು ನಿಷೇಧಿಸಿರತಕ್ಕಂತಹ ಸಾಹಿತ್ಯ. ದೇವರ ಸಾಮ್ರಾಜ್ಯ ಇನ್ನೂ ಒಳಗಿದೆ ಎಂಬುದಾಗಿ ಕ್ರಿಸ್ತ ಹೇಳಿದ್ದುಂಟು. ಅದೇನು ಬಸವಣ್ಣನವರ ಕಿವಿಗೆ ಬಿದ್ದಿತ್ತೋ, ಇಲ್ಲವೋ ಗೊತ್ತಿಲ್ಲ. ನಮ್ಮ ಉಪನಿಷತ್ತಿನಲ್ಲೂ ಕೂಡ ಇದು ಸಿಗುತ್ತದೆ ಎಂದು ಇಟ್ಟುಕೊಳ್ಳಿ. ಒಂದು ನಿರ್ಜಾತೀಯ ಸಮಾಜವನ್ನು ನಿರ್ಮಾಣ ಮಾಡಬೇಕು ಎಂಬುದಾಗಿ ಬಸವಣ್ಣನವರು ಹೊರಟರು. ಅದು ಮುಖ್ಯವಾಗಿ ಗಮನಿಸ ಬೇಕಾಗಿರುವಂಥದ್ದು. ದೇವಲೋಕ ಮತ್ತೆಲ್ಲಿ ಇದೆ ಎಂಬುದಾಗಿ ನಮ್ಮ ಎಲ್ಲ ಸಂತರೂ ಹೇಳಿದರಲ್ಲಿ, ಕ್ರಿಸ್ತನಿಂದ ಹಿಡಿದು ಮೊಹಮದ್‌ರವರೆಗೆ, ಆದರೆ ಅವರು ಇಷ್ಟು ದೂರ ಹೋಗಲಿಕ್ಕೆ ಸಾಧ್ಯವಾಗಿಲ್ಲ. ಆದರೆ ಬಸವಣ್ಣನವರು ಪ್ರಾಕ್ಟಿಕಲ್ ಮ್ಯಾನ್. ದೇವಲೋಕ ವನ್ನು ಬಸವಣ್ಣನವರ ಕಾಲಕ್ಕೆ ಯಾರೂ ನೋಡಿಕೊಂಡು ಬಂದಿರಲಿಲ್ಲ. ಇವತ್ತು ಯಾರೂ ನೋಡಿಕೊಂಡು ಬಂದಿಲ್ಲ. ಆದರೂ ಬಸವಣ್ಣನವರು ಕಂಡರು ದೇವಲೋಕವನ್ನು, ಸ್ವರ್ಗ ಸಾಮ್ರಾಜ್ಯವನ್ನು ಕಂಡರು. ಆದರೆ ಎಲ್ಲಿ? ಮನುಷ್ಯನ ಹೃದಯದಲ್ಲಿ ಕಂಡರು. ದಲಿತರ ಹೃದಯದಲ್ಲಿ ಕಂಡರು. ನಿಜಕ್ಕೂ ಆ ತತ್ವವನ್ನು ನಮ್ಮ ಜನ ಒಪ್ಪಿಕೊಳ್ಳಬೇಕಾಗಿದೆ. ಇನ್ನು ಯಾವ ದೇಶದ ತತ್ವದಲ್ಲೂ ಈ ಸತ್ಯ ಇಲ್ಲ.

ಸ್ತ್ರೀ ಸಮಾನತೆ ಶರಣರ ಮತ್ತೊಂದು ವಿಶಿಷ್ಟ ಕೊಡುಗೆ. ಪ್ರಪಂಚದಲ್ಲಿ ಸ್ತ್ರೀಯರೆಲ್ಲರೂ ಕೂಡ ನಿರ್ಲಕ್ಷಿತ ರಾಗಿದ್ದ ಸಂದರ್ಭದಲ್ಲಿ – ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್ ಯಾರನ್ನಾದರೂ ತೆಗೆದುಕೊಳ್ಳಿ, ಅವರು ಯಾರೂ ಸ್ತ್ರೀಯರಿಗೆ ಗೌರವವನ್ನು ಕೊಡಲಿಲ್ಲ. ಬಸವಣ್ಣ ನವರು ಅವರಿಗೆ ಪುರುಷನೊಡನೆ ಸಮಾನ ಸ್ಥಾನ ಕಲ್ಪಿಸಿದರು. ಅವರನ್ನು ಗುಲಾಮರಾಗಿ ಕಾಣುತ್ತಿದ್ದಂತಹ ಕಾಲವೂ ಉಂಟು. ಪ್ಲೇಟೋ ಅಂತಹ ಮಹಾನುಭಾವನೇ ಒಂದು ಕಡೆ ಎಲ್ಲೋ ಹೇಳುತ್ತಾನೆ. 'ಥ್ಯಾಂಕ್ ಗಾಡ್, ಐ ಆಮ್ ಬಾರ್ನ್ ವೆನ್ ಸಾಕ್ರಟೀಸ್ ಈಸ್ ಅಲೈವ್' ಅದೂ ಸರಿ. ಇನ್ನೊಂದು ಕಡೆ ಹೇಳುತ್ತಾನೆ. 'ಥ್ಯಾಂಕ್ ಗಾಡ್, ಐ ಅಮ್ ಬಾರ್ನ್ ನಾಟ್ ಎ ವುಮೆನ್, ಬಟ್ ಎ ಮ್ಯಾನ್' ಅಂತ. ನಮ್ಮವರೂ ಇದೇ ಕೆಲಸ ಮಾಡಿದ್ದಾರೆ ಎಂದು ಇಟ್ಟುಕೊಳ್ಳಿ. ಸ್ತ್ರೀಯರನ್ನು ಪೂಜೆ ಮಾಡಬೇಕು ಎನ್ನುವುದು ಏನೋ ಲಿಪ್ ಸಿಂಪತಿ ಅಂತ ಕಾಣಿಸುತ್ತದೆ. ಆದರೆ ಅವರು ಮಾಡಿರತಕ್ಕಂತಹ, ಕೊಟ್ಟಿರತಕ್ಕಂತಹ ಹಿಂಸೆ ಏನು? ಇವತ್ತಿಗೂ ಕೂಡ ಬಸವಣ್ಣನವರೊಬ್ಬರೇ ಇಡೀ ಪ್ರಪಂಚದಲ್ಲಿ ಮೊಟ್ಟಮೊದಲನೆಯದಾಗಿ ಸ್ತ್ರೀ ಸ್ವಾತಂತ್ರ್ಯವನ್ನು ಕಲ್ಪಿಸಿದವರು.

ಹೀಗೆ ನಿರ್ಜಾತೀಯ, ನಿರ್ಮತೀಯ ಲಿಂಗಾತೀತ ಸಮಾಜವೊಂದು ನಿರ್ಮಾಣವಾಗಬೇಕು ಎಂಬತಕ್ಕಂತಹ ಸಾಹಿತ್ಯವನ್ನು ನಾವು ಇನ್ನೆಲ್ಲೂ ಕಾಣುವುದಿಲ್ಲ. ಅದಕ್ಕೆ ಪೂರ್ವದ ಇತಿಹಾಸವನ್ನು ನೋಡಿದರೂ ಇದು ಕಾಣು ವುದಿಲ್ಲ. ನಾವು ಮತ್ತೆ ೨೦ನೇ ಶತಮಾನಕ್ಕೆ ಬರಬೇಕು,

ಇಂತಹ ಸಾಹಿತ್ಯವನ್ನು ಕಾಣಬೇಕಾದ ಪಕ್ಷದಲ್ಲಿ, ಅಂದ ಮೇಲೆ ಕನ್ನಡ ಸಾಹಿತ್ಯದಲ್ಲಿ ಇದಕ್ಕೆ ಎಂತಹ ಸ್ಥಾನ ಇದೆ? ಈಗಾಗಲೇ ಒಬ್ಬ ಮಿತ್ರರು ಹೇಳಿದರು–ಈ ಎಲ್ಲಾ ಮೌಲ್ಯಗಳನ್ನೊಳಗೊಂಡ ಶರಣ ಸಾಹಿತ್ಯದ ಅಧ್ಯಯನಕ್ಕಾಗಿ ಶರಣ ಸಾಹಿತ್ಯ ಪರಿಷತ್ತು ಅತ್ಯಂತ ಔಚಿತ್ಯಪೂರ್ಣವಾಗಿರ ತಕ್ಕಂಥದ್ದು ಎಂದು. ಈ ಕಾರ್ಯ ಎಂದೋ ಆಗಬೇಕಾಗಿತ್ತು. ಪ್ರಾಯಶಃ ಈ ನೂತನ ಮಹಾಸ್ವಾಮಿಗಳವರು ಮಾಡಿರ ತಕ್ಕಂತಹ ಪ್ರಪ್ರಥಮ ಪುಣ್ಯ ಕಾರ್ಯ ಇದು ಅಂತ ಕಾಣಿಸುತ್ತದೆ. ಅಲ್ಲಿ ಮೆಡಿಕಲ್ ಕಾಲೇಜ್ ಮಾಡಿದ್ದಾರೆ, ಅದೂ ಬೇಕು, ಬೇಡ ಅಂತ ಹೇಳುವುದಿಲ್ಲ; ಅದೂ ಸರೀನೆ. ಇನ್ನೂ ಅನೇಕ ಕಾಲೇಜುಗಳು ಇವೆ, ಅವೆಲ್ಲವೂ ಬೇಕು. ಆದರೆ ನಾನೇನು ಒಂದು ಚಿತ್ರವನ್ನು ಕಲ್ಪಿಸಿಕೊಂಡಿದ್ದೇನೆ ಈ ಪರಿಷತ್ತಿನ ಬಗ್ಗೆ, ಅದೆಲ್ಲವನ್ನು ಕುರಿತು ಈಗಾಗಲೇ ಕೆಲವು ನಿರ್ಣಯಗಳನ್ನು ಕೂಡ ಮಂಡಿಸಿದ್ದಾರೆ. ಈ ನಿರ್ಣಯಗಳು ಕಾರ್ಯಗತವಾದ ಪಕ್ಷದಲ್ಲಿ ಇದು ಅವೆಲ್ಲವನ್ನು ಮೀರಿಸತಕ್ಕಂತಹ ಸಂಸ್ಥೆಯಾಗುತ್ತದೆ ಎನ್ನುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಆಗ ಮೈಸೂರು ಕಲ್ಯಾಣವಾಗುತ್ತದೆ, ಬಸವ ಕಲ್ಯಾಣವಾಗುತ್ತದೆ; ಸಿದ್ಧಲಿಂಗೇಶ್ವರರೂ ಇಲ್ಲೇ ಇರುತ್ತಾರೆ, ಬಸವಣ್ಣನವರೂ ಇಲ್ಲೇ ಇರುತ್ತಾರೆ. ಇದು ಕಲ್ಯಾಣವಾಗಬೇಕು. ಈ ದೃಷ್ಟಿಯಿಂದ ಈ ಪರಿಷತ್ತು ಎಷ್ಟು ಔಚಿತ್ಯಪೂರ್ಣವಾಗಿದೆ ಎನ್ನುವುದನ್ನು ನಾವು ಯೋಚಿಸಬೇಕಾಗಿದೆ.

ಒಂದು ಮಹತ್ತರವಾದ ಗ್ರಂಥವೊಂದನ್ನು ಇತ್ತೀಚೆಗೆ ಓದುತ್ತಾ ಇದ್ದೆ. ಅದು ಹಿಂದಿಯಲ್ಲಿದೆ. ಭಾರತೀಯ ಸಾಮಾಜಿಕ ವಿಶ್ಲೇಷಣೆಯನ್ನು ಅದರಲ್ಲಿ ಮಾಡಿದ್ದಾರೆ. ಅದನ್ನು ಓದುವಾಗ ನನಗೆ ದುಃಖವಾಗುತ್ತದೆ. ಏಕೆ ಅಂತ ಹೇಳಿದರೆ, ನಾವು ದಾಸಗುಪ್ತನ ವೇದಾಂತದ ತತ್ವಶಾಸ್ತ್ರವನ್ನು ತೆಗೆದು ಕೊಳ್ಳಲಿ, ಅಥವಾ ರಾಧಾಕೃಷ್ಣ ಅವರ ಇಂಡಿಯನ್ ಫಿಲೋಸಫಿ ಓದುವಾಗ ಅಥವಾ ಇನ್ನು ಯಾವುದೇ ಭಾರತೀಯ ಸಂಸ್ಕೃತಿ ಇತಿಹಾಸವನ್ನು ನೋಡುವಾಗ ಕರ್ನಾಟಕದಲ್ಲಿ ಇಂತಹ ಮಹತ್ವಪೂರ್ಣವಾದಂತಹ ಆಂದೋಲನ, ಕ್ರಾಂತಿ ೧೨ನೇ ಶತಮಾನದಲ್ಲಿ ನಡೆದಿದೆ ಎಂಬುದನ್ನು ಸಂಪೂರ್ಣವಾಗಿ ಗಮನಿಸದೆ ಇರತಕ್ಕಂಥದ್ದು, ವೀರಶೈವದ ಬಗ್ಗೆ ಅಲ್ಲಿ ಇಲ್ಲಿ ಒಂದೆರಡು ಮಾತನ್ನು ಹೇಳಿರಬಹುದು. ಇಲ್ಲ ಅಂತ ಅಲ್ಲ. ಆದರೆ ಭಾರತೀಯ ಇತಿಹಾಸದಲ್ಲಿ ಇಂತಹ ಆಂದೋಲನ ಎಂದೆಂದೂ ನಡೆದಿಲ್ಲ. ಅಷ್ಟೇ ಅಲ್ಲ, ಪ್ರಪಂಚದಲ್ಲೂ ಬೇರೆ ಕಡೆ ನಡೆದ ಹಾಗೆ ನನಗೆ ಗೊತ್ತಿಲ್ಲ. ರಷಿಯನ್ ರೆವೆಲ್ಯೂಷನ್ ಬಿಟ್ಟುಬಿಟ್ಟರೆ, ಫ್ರಾನ್ಸ್‌ನಲ್ಲಿ ನಡೆದಂತಹ ರೆವೆಲ್ಯೂಷನ್–ಫ್ರಾನ್ಸ್‌ನಲ್ಲಿ ಯಾವತ್ತೂ ರೆವೆಲ್ಯೂಷನ್ ನಡೆಯುತ್ತಾ ಇದೆ ಬಿಡಿ–ಪ್ರಸಿದ್ಧವಾದದ್ದು, ನಿಜ ; ಆದರೆ ಇಂತಹ ಅಹಿಂಸಾತ್ಮಕವಾದ ರಕ್ತಪಾತವಿಲ್ಲದ ಕ್ರಾಂತಿ ಮತ್ತೆಲ್ಲಿಯೂ ಇರಲಿಲ್ಲ.

ಆದರೆ ಒಂದು ಮಾತು. ಸ್ವಾಮೀಜಿಯವರ, ಜತ್ತಿಯವರ ಕ್ಷಮೆಯನ್ನು ಬೇಡಿ ಹೇಳುತ್ತಿದ್ದೇನೆ; ತಮ್ಮೆಲ್ಲರ ಕ್ಷಮೆಯನ್ನು ಬೇಡಿ ಕೂಡ. ರಕ್ತಪಾತ ಆಗಿದ್ದರೆ ತುಂಬಾ ಚೆನ್ನಾಗಿತ್ತು ಅಂತ ಕಾಣಿಸುತ್ತದೆ ಈ ದೇಶಕ್ಕೆ. ಅಹಿಂಸಾತ್ಮಕವಾದಂತಹ ಚಳುವಳಿಯಿಂದ ಗಾಂಧೀಜಿಯವರು ಸ್ವರಾಜ್ಯವನ್ನು ಗೆದ್ದು ಕೊಟ್ಟರು. ಇಂಗ್ಲೀಷ್‌ನವರನ್ನು ಓಡಿಸಿದರು, ನಿಜ. ಆದರೆ ಇವತ್ತಿನ ಪರಿಸ್ಥಿತಿ ಏನಾಗಿದೆ? ಬಸವಣ್ಣನವರಿಗೆ ಮುಂದೇನಾಗುತ್ತದೆ ಎಂದು ಗೊತ್ತಿತ್ತು ಅಂತ ನನಗೆ ಅನ್ನಿಸುತ್ತದೆ. ಪ್ರವಾದಿ ಬಸವಣ್ಣನಿಗೆ ಇಂಡಿಯಾ ದೇಶದಲ್ಲಿ ಎಂತೆಂಥಹ ಪೀಳಿಗೆಗಳು ಬರುತ್ತವೆ ಎನ್ನುವುದು ಗೊತ್ತಿತ್ತು. ಅವರು ನಿರ್ಜಾತೀಯ ಸಮಾಜವನ್ನು ಸ್ಥಾಪನೆ ಮಾಡಲಿಕ್ಕೆ ಹೊರಟರಲ್ಲಾ, ನಾವು ಆ ಬಗ್ಗೆ ಏನಾದರೂ ಯೋಚನೆ ಮಾಡಿದ್ದೇವೆಯೇ? ಇವತ್ತಾದರೂ ಬಸವಣ್ಣನವರ ಮಾತನ್ನು ನಾವು ನೆರವೇರಿಸದಿದ್ದ ಪಕ್ಷದಲ್ಲಿ ಬಸವಣ್ಣನವರ ಭಾವಚಿತ್ರವನ್ನು ಇಟ್ಟುಕೊಂಡು ಏನು ಪ್ರಯೋಜನ ಸ್ವಾಮಿ? ಬಸವಣ್ಣನವರ ಬಾವಚಿತ್ರ ನಮಗೆ ಮುಖ್ಯವಲ್ಲ. ಅವರ ವಚನದಲ್ಲಿ ಅವರು ಬದುಕಿದ್ದಾರೆ. ಅವರು ಜೀವಂತವಾಗಿರುವುದು ಅವರ ಭಾವಚಿತ್ರದಲ್ಲಲ್ಲ, ಅವರ ವಚನದಲ್ಲಿ. ಕುವೆಂಪು ಅವರು ಬಸವೇಶ್ವರ ಎಂಬ ಒಂದು ಪದ್ಯವನ್ನು ಬರೆದು ಹೇಳುತ್ತಾರೆ. 'ಅವತ್ತು ಇರಲಿ, ಇವತ್ತು ನೀನು ಬೇಕು' ಅಂತ. ಅವರ ಎತ್ತರಕ್ಕೆ ಏರಲಿಕ್ಕೆ ಆಗುವುದಿಲ್ಲ ನಿಜ. ಯಾರೂ ಆ ಎತ್ತರಕ್ಕೆ ಏರಲಿಕ್ಕೆ ಸಾಧ್ಯವಿಲ್ಲ.

ಅವರ ವಚನಗಳು ಅವರ ಹೃದಯದಿಂದಲೇ ಬಂದಿರತಕ್ಕಂಥದ್ದು. ಅಂದಮೇಲೆ ಬಸವಣ್ಣ ನಿಜಕ್ಕೂ ಕೂಡ





ವಚನಗಳಲ್ಲಿ ಅಡಗಿದ್ದಾನೆ ಎಂಬುದನ್ನು ನಾವು ಮರೆಯುವ ಹಾಗೆ ಇಲ್ಲ. ಅವರು ವೇದ ಪುರಾಣಾಗಮ ಶಾಸ್ತ್ರಗಳನ್ನು ನಿರಾಕರಿಸಿದ್ದು ನಿಜ; ಆದರೆ ಉಪನಿಷತ್ತನ್ನು ಯಾವ ಶರಣರೂ ಎಲ್ಲೂ ಮರೆತೂ ಕೂಡ ಬಯ್ಯಲಿಲ್ಲ. ಏಕೆ? ಇನ್ನು ಆ ಬಗ್ಗೆ ನಾನು ಲಂಬಿಸಿಕೊಂಡು ಹೋಗುವುದಿಲ್ಲ.

ಇನ್ನು ಒಂದು ಮಾತು. ಅದನ್ನು ಮೇಲಿಂದ ಮೇಲೆ ನಾನು ಹೇಳುತ್ತಿದ್ದೇನೆ. ಬಸವಣ್ಣನವರು ದುರ್ದೈವಿಗಳು. ಶಂಕರಾಚಾರ್ಯರು ಇಲ್ಲಿಂದ ಅಲ್ಲಿಯವರೆಗೆ ಹೋಗಿ ಬೋಧಿಸಿದ್ದು ಯಾವ ಭಾಷೆಯಲ್ಲಿ? ಅವರು ಜಗತ್ತಿನ ಅತ್ಯಂತ ಶ್ರೇಷ್ಠ ಮೇಧಾವಿ ನಿಜ. ಅವರು ಯಾವ ಭಾಷೆಯಲ್ಲಿ ಬೋಧಿಸಿದರು? ಸಂಸ್ಕೃತದಲ್ಲಿ ಬೋಧಿಸಿದರು. ಅನೇಕರಿಗೆ ಗೊತ್ತಾಗಬಾರದು ಅಂತ. ಈ ಚಿದಂಬರ ರಹಸ್ಯ ಹೊರಬೀಳಬಾರದು ಅಂತ. ಆಧ್ಯಾತ್ಮ ಕೆಲವರಲ್ಲೇ ಇರಬೇಕು ಅಂತ. ಇದು ನಾನು ಹೇಳುತ್ತಾ ಇರತಕ್ಕಂಥ ಮಾತಲ್ಲ. ಉಪಾಧ್ಯೆಯವರು ಈ ಮಾತನ್ನು ಹೇಳಿದ್ದಾರೆ. ಬುದ್ಧ ಪಾಲಿಯಲ್ಲಿ ಬೋಧಿಸುತ್ತಾನೆ. ಬಸವೇಶ್ವರರು ಕನ್ನಡದಲ್ಲಿ ಬೋಧಿಸಿದರು. ಸಂಸ್ಕೃತ ಬರುತ್ತಿರಲಿಲ್ಲವಾ ಬಸವೇಶ್ವರರಿಗೆ? ಬಸವೇಶ್ವರರು ನನಗನ್ನಿಸುತ್ತದೆ, ಅವರು ಸಂಗಮ ಕ್ಷೇತ್ರಕ್ಕೆ ಹೋಗುವ ವೇಳೆಗೆ ಬೇಕಾದಷ್ಟು ಸಂಸ್ಕೃತವನ್ನು ಓದಿದ್ದರು ಅಂತ. ಹೇಗೆ ಶಂಕರಾಚಾರ್ಯರು ೭ ವರ್ಷ ೮ ವರ್ಷದೊಳಗೆ ಸಂಸ್ಕೃತದಲ್ಲಿ ಪಾರಂಗತರಾದರೋ ಹಾಗೆ ಬಸವಣ್ಣನವರೂ ಪಾರಂಗತರಾಗಿರಬೇಕು. ಆದರೂ ಶ್ರೀಸಾಮಾನ್ಯರಿಗೆ ಸುಲಭದಲ್ಲಿ ಮುಟ್ಟುವಂತಹ ಜನತೆಯ ಭಾಷೆಯಲ್ಲಿ ಬೋಧಿಸಿದರು.

ಕೊನೆಯದಾಗಿ ನನ್ನದೊಂದು ಸಲಹೆ. ಈ ಪರಿಷತ್ತಿನ ಆಶ್ರಯದಲ್ಲಿ ಇಡೀ ಜಗತ್ತೇ ಕಣ್ಣು ತೆರೆಯುವಂತಹ ಒಂದು ಭವ್ಯ ಶರಣ ಮ್ಯೂಸಿಯಂ ಈ ಜಗದ್ಗುರುಗಳವರ ನೇತೃತ್ವದಲ್ಲಿ ಆಗಬೇಕು. ಈ ಕೆಲಸ ವಿಧಾನಸೌಧಕ್ಕಿಂತಲೂ ತುಂಬಾ ಮಿಗಿಲಾದದ್ದು. ಬಸವಣ್ಣನವರ ಧಾರ್ಮಿಕ, ಸಾಮಾಜಿಕ, ಆಧ್ಯಾತ್ಮಿಕ ಆಂದೋಲನವನ್ನು ಮೂರ್ತೀಕರಿಸುವ, ಚಿತ್ರಿಸುವ ಒಂದು ಮ್ಯೂಸಿಯಂ ಆದಷ್ಟು ಶೀಘ್ರದಲ್ಲಿ ಪ್ರಾರಂಭವಾಗಲಿ. ಇದರ ಜೊತೆಗೆ ಶಿವಶರಣರ ಸಾಹಿತ್ಯವನ್ನು ಕುರಿತ ಸಂಶೋಧನೆಗೆ ಭಾಷಾಂತರಕ್ಕೆ ನೆರವಾಗುವಂತಹ ಒಂದು ಅಧ್ಯಯನ ಕೇಂದ್ರ ರೂಪುಗೊಳ್ಳಲಿ. ❑

## ಆಧುನಿಕ ವಚನಗಳು

–ಸಾಹಿತ್ಯರತ್ನ ಅನ್ನದಾನಯ್ಯ ಪುರಾಣಿಕರು
ಬೆಂಗಳೂರು.

ಲೋಕದಿಚ್ಛೆಯಂತೆ ಬರೆದವರು, ಒರೆದವರು ಲೋಕಪ್ರಿಯರಾಗುವರು ।
ಆತ್ಮನ ಇಚ್ಛೆಯಂತೆ ಬರೆದವರು, ಒರೆದವರು ಅಜ್ಞಾತರಾಗಿ ಉಳಿಯುವರಯ್ಯಾ ।
ಜನರು ಮೆಚ್ಚುವಂತೆ ನುಡಿದವರು ನಡೆದವರು ಜನಮನ್ನಣೆ ಗಳಿಸುವರು ।
ಮನ ಮೆಚ್ಚುವಂತೆ ನುಡಿದವರು, ನಡೆದವರು ದೂಷಣೆಗೆ ಗುರಿಯಾಗುವರಯ್ಯಾ ।
ಶ್ರೀ ಗುರು ಸಿದ್ಧಲಿಂಗೇಶ್ವರ ನೀನು ಇರಿಸಿದಂತೆ ಇರುವವರು ಬಯಸಿದಂತೆ ಬಾಳುವರು

ಪಂಚಭೂತಗಳನು ಹಿಂಸಿಸಿ ಘಾಸಿಗೊಳಿಸಿದ ಮಾನವರಿಂದು ಅವುಗಳ ಪ್ರಕೋಪಕೆ
ಗುರಿಯಾಗಿಹರಯ್ಯ ! ಮುನಿಸಿಕೊಂಡಿರುವ ಭೂಮಿ ಭೂಕಂಪವಾಗಿ ಜ್ವಾಲಾಮುಖಿಯಾಗಿ,
ರುದ್ರಾವತಾರ ತಾಳಿಹುದು। ಕೋಪಿಸಿಕೊಂಡಿರುವ ಜಲವು ಸುನಾಮಿಯಾಗಿ, ಲೈಲಾ ಆಗಿ,
ಅತಿವೃಷ್ಟಿಯಾಗಿ ಪ್ರಕಟವಾಗಿಹುದು ! ಘಾಸಿಗೊಂಡಿರುವ ಗಾಳಿ, ಚಂಡಮಾರುತವಾಗಿ, ಬಿರುಗಾಳಿಯಾಗಿ
ಬೀಸುತಿಹುದು. ಭುಗಿಲೆದ್ದ ಬೆಂಕಿ ಕಾಡುಗಿಚ್ಚಾಗಿ ದಾವಾಲಿನವಾಗಿ ದಹಿಸುತಲಿಹುದು ! ಆಕ್ರೋಶಗೊಂಡಿರುವ
ಆ ಶಾಕ, ಬೆಂಕಿಯ ಉಂಡೆಯಾಗಿ, ಬೆಂಕಿಯ ಮಳೆಯಾಗಿ ಸುರಿಯುತಿಹುದು ! ಆಕಾಶದಗಲ
ಬಾಯ್ತೆರೆದು ಭೂಮಂಡಲ ನುಂಗಲು ಸನ್ನದ್ಧವಾಗಿಹವು । ಪ್ರಳಯದಡದಲಿ ನಿಂತಿರುವ
ಮಾನವರಿಗೆ ಬುದ್ಧಿ ಬಂದಿಲ್ಲ । ತಪ್ಪಿನ ಅರಿವುಂಟಾಗಿಲ್ಲ !
ಶ್ರೀ ಗುರು ಸಿದ್ಧಲಿಂಗೇಶ್ವರಾ ಈ ಮೂಢ ಮಾನವರಿಗೆ ಸನ್ಮತಿಯನಿತ್ತು ಜಗವನು ರಕ್ಷಿಸಯ್ಯ ।

# ಅಣ್ವಸ್ತ್ರ ಜಗತ್ತಿಗೆ ಗುರುಬಸವಣ್ಣನವರ ವಿಶ್ವಶಾಂತಿಯ ಸಂದೇಶ

-ಯೋಗೀಶ್ ನಿವಿಣಕಲ್ಲ *

ಇಂದು ಜಗತ್ತು ವೈಜ್ಞಾನಿಕತೆಯ ನಾಗಾಲೋಟದಲ್ಲಿ ಸಾಗುತ್ತಿದೆ. ಮಾನವಕುಲಕ್ಕೆ ಹೊಸ ಹೊಸ ಸಂಶೋಧನೆಗಳ ಮೂಲಕ ಹಲವಾರು ಕೊಡುಗೆಗಳನ್ನು ನೀಡುತ್ತಾ ಇಂದು ವಿಶ್ವ ಒಂದು ಮುಷ್ಠಿಯಲ್ಲಿ(Global Village) ಅಡಗಿ ಕುಳಿತಿದೆ. ವಿಜ್ಞಾನ ಒಂದೆಡೆ ಮಾನವಕುಲಕ್ಕೆ ಭೌತಿಕ ಸುಖ ನೀಡಿ ಇನ್ನೊಂದೆಡೆ ಆತನ ಆಂತರ್ಯದ ಶಾಂತಿ ನೆಮ್ಮದಿಗಳನ್ನು ಕಳೆಯತೊಡಗಿದೆ. ಇಂದು ಇಡೀ ಜಗತ್ತು ಅಣ್ವಸ್ತ್ರಗಳ ಭಯದ ವಾತಾವರಣದ ಕರಿನೆರಳಿನಲ್ಲಿ ನಿಂತಿದೆ. ಒಂದು ನಿರ್ದಿಷ್ಟ ಸ್ಥಳದಲ್ಲಿನ ಆಮ್ಲಜನಕವನ್ನು ಕೆಲವೇ ಸೆಕೆಂಡುಗಳಲ್ಲಿ ನಶಿಸುವಂತೆ ಮಾಡಿ ಸಾವಿರಾರು ಜನರನ್ನು ಕೊಲ್ಲುವಂತಹ ಥರ್ಮೋಬರಿಕ್ ಅಸ್ತ್ರಗಳ ವ್ಯಾಪಾರಸಂತೆ ಇಂದು ಜಗತ್ತಿನಾದ್ಯಂತ ನಡೆದಿದೆ. ಇದನ್ನು ಸಾವಿನ ವ್ಯಾಪಾರ ಸಂತೆ ಎಂದು ವ್ಯಾಖ್ಯಾನಿಸುವುದು ಅತ್ಯಂತ ಸಮಂಜಸವೆನಿಸಬಹುದು.

ಪ್ರಕೃತಿಯ ಕಿರೀಟದಂತಿರುವ ಮಾನವನ ಈವರೆಗಿನ ಎಲ್ಲಾ ಸಾಧನೆ-ಸಂಶೋಧನೆಗಳು ಕಾಲಗರ್ಭದಲ್ಲಿ ಅಡಗಿ ಹೋಗುವಂತಹ ಅತ್ಯಂತ ಭಯಾನಕ ಸ್ಥಿತಿ ಇಂದು ಸೃಷ್ಟಿಯಾಗಿದೆ. ಇಂತಹ ಸಂದಿಗ್ಧ ಸಮಯದಲ್ಲಿ ಎಚ್ಚೆತ್ತ ಬುದ್ಧಿಜೀವಿಗಳು ವಿಶ್ವಶಾಂತಿ ಕುರಿತು ತಮ್ಮ ಗಮನ ಹರಿಸಿರುವುದೊಂದು ಉತ್ತಮ ಬೆಳವಣಿಗೆಯಾಗಿದೆ. ಇಂದು ಈ ಎಚ್ಚರ ಅನಿವಾರ್ಯ ಹಾಗೂ ಅತ್ಯಂತ ಅವಶ್ಯಕವಾಗಿದ್ದು ಅಣ್ವಸ್ತ್ರಗಳಿಂದ ಮುಕ್ತವಾದ ಒಂದು ಸುಭದ್ರ ಜಗತ್ತನ್ನು ನಾವಿಂದು ನಿರ್ಮಿಸಬೇಕಾಗಿದೆ. ಈ ಸಂಬಂಧ ಮಹಾಮಾನವತಾವಾದಿ, ವಿಶ್ವ ಭ್ರಾತೃತ್ವಕ್ಕೆ ಮುನ್ನುಡಿ ಬರೆದ ಲೋಕಮಾನ್ಯ ಶ್ರೀ ಬಸವೇಶ್ವರರ ವಿಚಾರಧಾರೆ ಅತ್ಯಂತ ಮೌಲಿಕವಾಗಿದೆ.

*ಮರ್ತ್ಯಲೋಕದ ಮಹಾಮನೆ ಹಾಳಾಗಿ*
*ಹೋಗಬಾರದೆಂದು*
*ಕರ್ತನಟ್ಟಿದನಯ್ಯಾ ಒಬ್ಬ ಶರಣನ*
*ಆ ಶರಣ ಬಂದು ಮರ್ತ್ಯಲೋಕವನ್ನೇ ಕೈಲಾಸವ*
*ಮಾಡಿದನಾಗಿ*
*ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಕೆಯಾದನು.*

ಈ ಜಗತ್ತು ಭಗವಂತನ ಮಹಾಮನೆಯಾಗಿದ್ದು ಅದು ಮಾನವ ನಿರ್ಮಿತ ಜಾತಿ ಕಲಹ-ವೈಷಮ್ಯ-ಶೋಷಣೆ ಮುಂತಾದ ಅಜ್ಞಾನದ ಅಗ್ನಿಜ್ವಾಲೆಯಲ್ಲಿ ಬೆಂದು ನಾಶವಾಗುವುದು. ಭಗವಂತನಿಗೆ ಸರಿಕಾಣದೆ ಜಗದ ಸರ್ವಾಂಗೀಣಾಭಿವೃದ್ಧಿಗಾಗಿ ತನ್ನ ವಿಶೇಷ ಕಾರುಣ್ಯ ಹರಿಸಿ ಕಳುಹಿಸಿಕೊಟ್ಟ ಮಹಾನ್ ಪುರುಷರೆ ೧೨ನೇ ಶತಮಾನದ ಮಹಾ ಮಾನವತಾವಾದಿ ಸಂತ ಗುರು ಬಸವಣ್ಣನವರು. ವಿಶ್ವ ಧರ್ಮದ ನೀಲಾ ಕಾಶದಲ್ಲಿ ವಿಶ್ವಶಾಂತಿ-ವಿಶ್ವಭ್ರಾತೃತ್ವದ ಸುಂದರ ಚಿತ್ತಾರ ಚಿತ್ರಿಸಿದ ಮಹಾನ್ ಚಿತ್ರಗಾರ ಗುರು ಬಸವಣ್ಣನವರು. ವಿಶ್ವಶಾಂತಿ ಕುರಿತು ಅವರು ನೀಡುವ ಸುಬೋಧೆ ವಿಶ್ವಶಾಂತಿ ಸಾರುವ ನೌಕೆಯೊಳಗಿನ ದಿಕ್ಸೂಚಿಯಿದ್ದಂತೆ ! ಅವುಗಳ ಅನುಷ್ಠಾನದಿಂದ ಜಗತ್ತನ್ನು ಶಾಂತಿಯ ಮಹಾಮನೆಯನ್ನಾಗಿಸಬಹುದಾಗಿದೆ.

*ಒತ್ತಿ ಹೊಸೆದ ಕಿಚ್ಚು !*
*ಒತ್ತಿ ಹೊಸೆದ ಕಿಚ್ಚನಾ ಮಾಡಿದೆನೆಂದು ಮುಟ್ಟಿ ಹಿಡಿದಡೆ*
*ಕೈ ಬೇಯದಿಹುದೆ ?*

ಇಂದು ಮನುಷ್ಯ ಅಣ್ವಸ್ತ್ರಗಳನ್ನು ತನ್ನ ಆಟಿಕೆಯ ವಸ್ತುಗಳನ್ನಾಗಿಸಿಕೊಂಡು ಹೆಚ್ಚು ಹೆಚ್ಚು ಅಣ್ವಸ್ತ್ರಗಳನ್ನು ಹೊಂದುವುದರಿಂದ ತಾನು ಸುಭದ್ರ ಹಾಗೂ ನೆರೆ ರಾಷ್ಟ್ರವನ್ನು ಭಯಪಡಿಸಬಹುದೆಂಬ ಹುಚ್ಚು ಭ್ರಾಂತಿಗೆ ಒಳಗಾಗಿದ್ದಾನೆ. ಈ ಹುಚ್ಚು ಭ್ರಾಂತಿ ಕಂಡೇ ಶ್ರೀ ಬಸವೇಶ್ವರರು ಒತ್ತಿ ಹೊಸೆದ ಕಿಚ್ಚ ನಾ ಮಾಡಿದೆನೆಂದು ಮುಟ್ಟಿದರೆ ಅದು ಕೈಯನ್ನು ಸುಡದೆ ಬಿಡುವುದೆ? ಎಂದು ಎಚ್ಚರಿಸುತ್ತಾರೆ. ನಾವು ಹೊಸೆದ ಅಸ್ತ್ರಗಳೇ ನಮ್ಮ ಅಹಂಕಾರದಿಂದ ನಮ್ಮ ವಿನಾಶಕ್ಕೆ ಕಾರಣವಾಗುತ್ತದೆಂಬ ಸತ್ಯದರಿವನ್ನು ತಿಳಿಸುವ ಬಸವಣ್ಣನವರು ಕಾಣಿಯ ಲೋಭವನ್ನು ಕೋಟಿ ಲಾಭದ ಪ್ರತಿಫಲವನ್ನು ಕಳೆದುಕೊಳ್ಳಬಾರದೆಂದು ತಿಳಿಸುತ್ತಾರೆ.

* C/o ಎಸ್. ವಾಸುದೇವ್, ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ.





ಇಂದು ಅಣ್ವಸ್ತ್ರಗಳ ಲೋಕದಲ್ಲಿ ಮುಳುಗಿರುವ ಮನುಷ್ಯ ಅವುಗಳ ವಿನಾಶದ ಕುರಿತು ಚಿಂತಿಸುವ ವ್ಯವಧಾನವನ್ನು ಕಳೆದುಕೊಂಡಿದ್ದಾನೆ. ೧೯೫೨ರಲ್ಲಿ ಅಮೆರಿಕ ಫೆಸಿಫಿಕ್ ಮಹಾಸಾಗರದ ಬಿಕಿನಿ ದ್ವೀಪದಲ್ಲಿ ಹೈಡ್ರೋಜನ್ ಬಾಂಬನ್ನು ಪರೀಕ್ಷಾರ್ಥ ಸ್ಫೋಟಿಸಿತು. ಈ ಸ್ಫೋಟದಲ್ಲಿ ಉತ್ಪನ್ನವಾದ ಉಷ್ಣತೆಯ ಪ್ರಮಾಣ ೮೦° ಕೋಟಿ ಸೆಲ್ಸಿಯಸ್‌ಗಳು ಅಂದರೆ ಸೂರ್ಯನ ಗರ್ಭದಲ್ಲಿರುವ ಉಷ್ಣತೆಯ ಹತ್ತರಷ್ಟು ಆ ಪ್ರಬಲ ಸ್ಫೋಟದಿಂದ ಇಡೀ ಜೀವಸಂಕುಲವೇ ನಡುಗಿತು. ತಳಮಳ ಕಂಪನ, ಅಷ್ಟೇ ಅಲ್ಲದೆ ಮಾನಸಿಕ ಅಸ್ಥಿರತೆಗೂ ಕಾರಣವಾಯಿತು. ೧೯೬೦ರ ದಶಕದಲ್ಲಿ ಜನರನ್ನು ಅಲ್ಲಿ ಪುನರ್ ನೆಲೆಗೊಳಿಸುವ ಪ್ರಯತ್ನ ನಡೆಸಲಾದರೂ ಅದು ಸಂಪೂರ್ಣ ವಿಫಲವಾಯಿತು. ಸುಮಾರು 54 ವರ್ಷ ಕಳೆದರೂ ಇಂದಿಗೂ ಆ ದ್ವೀಪಗಳು ನಿರ್ಜನ ಪ್ರದೇಶಗಳಾಗಿಯೇ ಉಳಿದಿವೆ. ಈ ಅಣ್ವಸ್ತ್ರ ಸಮರವೇನಾದರೂ ನಮ್ಮ ಈ ಭೂಮಿ ಮೇಲೆ ಜರುಗಿದರೆ ಏನಾಗಬಹುದೆಂಬುದಕ್ಕೆ ಈ ಬಿಕಿನಿ ದ್ವೀಪಗಳು ಇಂದಿಗೂ ಜೀವಂತ ಸಾಕ್ಷಿಯಾಗಿ ನೆಲೆನಿಂತಿದೆ. ನಾವಿಂದು ಈ ಅಣ್ವಸ್ತ್ರಗಳು ಉಂಟುಮಾಡುವಂತಹ ಭೀಕರತೆಯ ಪರಿಣಾಮವನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

**ಕರ್ತಾರನ ಕಮ್ಮಟ !**

*ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ*
*ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ*
*ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ,*
*ಕೂಡಲಸಂಗಮದೇವಾ !*

ಗುರುಬಸವಣ್ಣನವರ ದೃಷ್ಟಿಯಲ್ಲಿ ಈ ಜಗತ್ತು ಮನಸ್ಸು-ಭಾವನೆಗಳನ್ನೊಳಗೊಂಡ ಒಂದು ಸೂಕ್ಷ್ಮ ಚೇತನ. ಅದು ಸಚ್ಚಿದಾನಂದಾತ್ಮಕವಾದದ್ದು ಮತ್ತು ಅದು ಭಗವಂತನ ಮಹಾಮನೆಯು ಆಗಿದೆ ಎನ್ನುವ ಬಸವಣ್ಣನವರು ಇಲ್ಲಿ ಅರ್ಥಪೂರ್ಣ ಬದುಕು ನಮ್ಮದಾದರೆ ಮಾತ್ರ ಅದು ಭಗವಂತನಿಗೆ ಮೆಚ್ಚುಗೆಯಾಗುತ್ತದೆ ಎನ್ನುತ್ತಾರೆ. ಅಣ್ವಸ್ತ್ರ ಸಂಬಂಧ ಈ ಪ್ರಕೃತಿಯ ಮೇಲೆ ಜರುಗುವ ನಿರಂತರ ಅತ್ಯಾಚಾರವನ್ನು ಬಸವಣ್ಣನವರು ಪ್ರಬಲವಾಗಿ ಖಂಡಿಸುತ್ತಾರೆ

*ಮರನ ಹೂವ ಕೊಯಿದು ಮರಕ್ಕೇರಿಸಿ*
*ಕರುವನಗಲಿಸಿ ತಾಯ ಮರುಗಿಸಿ*
*ಮೊಲೆವಾಲ ಕರೆದುಣಬೇಡವೋ !*

ಗುರುಬಸವಣ್ಣನವರ ದೃಷ್ಟಿಯಲ್ಲಿ ಸಮಸ್ತ ಸಂಪನ್ಮೂಲಗಳನ್ನು ತನ್ನ ಒಡಲಿನಲ್ಲಿಟ್ಟುಕೊಂಡಿರುವ ಏಕೈಕ ಘಟಕ ಈ ಪ್ರಕೃತಿಯಾಗಿದೆ. ಇಂಥ ಪ್ರಕೃತಿಯನ್ನು ಮಾನವ ತನ್ನ ಸ್ವಾರ್ಥಕ್ಕೆ ಮತ್ತು ಪ್ರಕೃತಿ ಧರ್ಮಕ್ಕೆ ವಿರುದ್ಧವಾಗಿ ಎಂದೂ ಬಳಸಬಾರದೆಂಬ ಎಚ್ಚರಿಕೆ ನೀಡುವ ಬಸವಣ್ಣನವರು ಪ್ರಕೃತಿ ಯನ್ನು ಎಂದೂ ತನ್ನ ಕೈಗೊಂಬೆಯನ್ನಾಗಿಸಿಕೊಳ್ಳುವ ಪ್ರಯತ್ನ ಮಾಡಬಾರದೆನ್ನುತ್ತಾರೆ.

ಇಂದು ವಿಜ್ಞಾನವೇ ಪರಿಸರದ ಶತ್ರುವಾಗಿ ಮಾನವನ ಜೀವವಾಸದ ಈ ಭೂಮಿ ಬಾಳಕು ಅಯೋಗ್ಯವಾಗುತ್ತಿದೆ. ಈ ಅಣ್ವಸ್ತ್ರಗಳ ಪ್ರಯೋಗಗಳಿಂದ ಬಿಡುಗಡೆಗೊಳ್ಳುವ ರೇಡಿಯೋ ನ್ಯೂಕ್ಲೈಡ್ ಮತ್ತು ಅಯೋಡೈನ್‌ಗಳು ಅಗಾಧ ಪ್ರಮಾಣದಲ್ಲಿ ವಾಯುಮಂಡಲವನ್ನು ಸೇರುತ್ತಿದೆ. ಅವು ಮಳೆಯೊಂದಿಗೆ ಸಂಯೋಜಕಗೊಂಡು ಆಹಾರ ಸರಪಣಿಯನ್ನು ಸೇರಿ ಅದು ಮನುಷ್ಯದೇಹದಲ್ಲಿ ಪಸರಿಸಿ ಹಲವಾರು ರೋಗಗಳನ್ನುಂಟು ಮಾಡುತ್ತಿದೆ. ಅನುವಂಶೀಯ ಅವ್ಯವಸ್ಥೆಗಳಿಗೂ (Genetic disorders)ಕಾರಣವಾಗಿದೆ. ಇಂದಿನವರೆಗೂ ಯಾವ ದೇಶವೂ ಸಹ ಈ ನ್ಯೂಕ್ಲಿಯರ್ ತ್ಯಾಜ್ಯ ವಸ್ತುಗಳ ಸುರಕ್ಷಿತ ಶೇಖರಣೆಗೆ ಯಾವ ವಿಧದ ಸಾಧನವನ್ನು ರಚಿಸಿಕೊಂಡಿಲ್ಲ. ಕಳೆದ ೫೦ ವರ್ಷಗಳಲ್ಲಿ ಪರಿಸರದ ಮೇಲೆ ಮನುಷ್ಯ ಎಸಗಿರುವ ಅತ್ಯಾಚಾರದ ವ್ಯಾಪ್ತಿ ಅವನು ೨೦,೦೦,೦೦೦ ವರ್ಷಗಳಲ್ಲಿ ಎಸಗಿರಬಹುದಾದ ಅತ್ಯಾಚಾರಕ್ಕಿಂತ ಅಧಿಕ ಎಂದು ಪ್ರಖ್ಯಾತ ಶಾಸ್ತ್ರಜ್ಞರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಪ್ರಕೃತಿಯ ಅವಿಭಾಜ್ಯ ಅಂಗವಾದ ಮನುಷ್ಯ ಪ್ರಕೃತಿಯಿಂದ ದೂರವುಳಿದು ಬದುಕಲು ಸಾಧ್ಯವಿಲ್ಲ. ಪ್ರಕೃತಿಯನ್ನು ಬದುಕಿಗೆ ಪೂರಕವನ್ನಾಗಿಸಿಕೊಂಡು ಬದುಕುವುದು ಜೀವನ ಕಲೆ ಎಂದು ತಿಳಿಸುವ ಗುರುಬಸವಣ್ಣನವರು ಆ ದಿಕ್ಕಿನಲ್ಲಿ ನಮ್ಮನ್ನು ಕರೆದೊಯ್ಯುವ ಪ್ರಯತ್ನ ಮಾಡಿದ್ದಾರೆ.

**ದಯವೇ ಧರ್ಮದ ಮೂಲ :**

ಮನುಷ್ಯನ ಮನದಾಳದಲ್ಲಿ 'ಧರ್ಮ'ದ ಅರ್ಥ ತಪ್ಪಾಗಿ ಅಚ್ಚಾಗಿರುವುದು ಈ ಅಣ್ವಸ್ತ್ರಗಳ ಹುಚ್ಚು ಪೈಪೋಟಿಗೆ

ಕಾರಣವಾಗಿದೆ. ಈ ಅಣ್ವಸ್ತ್ರಗಳ ಸಂಗ್ರಹ ಹಿನ್ನಲೆಯಲ್ಲಿ ಧರ್ಮದ ಸೂಕ್ಷ್ಮವಾಸನೆ ಕಾರ್ಯಪ್ರವೃತ್ತಗೊಂಡಿರುವುದನ್ನು ನಾವಿಂದು ಕಾಣಬಹುದು. ಈ ಕಾರಣಕ್ಕಾಗಿ ಬಸವಣ್ಣನವರು ವಿಶ್ವಜನತೆಯಲ್ಲಿ ಶಾಂತಿ ಮತ್ತು ಭ್ರಾತೃತ್ವ ನೆಲೆಗೊಳಿಸಲು 'ಧರ್ಮ'ದ ಯಥಾರ್ಥ ಅರಿಯಲು ಪ್ರೇರೇಪಿಸುತ್ತಾರೆ.

*ದಯೆವಿಲ್ಲದ ಧರ್ಮವುದೇವುದಯ್ಯ ?*
*ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯು*
*ದಯವೇ ಧರ್ಮದ ಮೂಲವಯ್ಯಾ !*
*ಕೂಡಲಸಂಗಮದೇವಯ್ಯನಂತಲ್ಲದೊಲ್ಲನಯ್ಯ.*

ದಯೆ ಧರ್ಮದ ಜೀವಾಳ, ದಯೆಯನ್ನು ಪ್ರತಿಪಾದಿಸದ ಧರ್ಮ ಧರ್ಮವೇ ಅಲ್ಲ ಎಂಬುದು ಬಸವಣ್ಣನವರ ನಿಶ್ಚಲ ಅಭಿಪ್ರಾಯ. ಆಧ್ಯಾತ್ಮ ಮತ್ತು ಮಾನವತಾ ಸಿದ್ಧಾಂತಗಳ ತಳಹದಿಯ ಮೇಲೆ ಧರ್ಮ ತತ್ವಗಳನ್ನು ಸಾದರಪಡಿಸಿದ ಬಸವಣ್ಣನವರು ಆ ತತ್ವದಂತೆ ಪ್ರತಿಯೊಬ್ಬರು ಪ್ರಾಮಾಣಿಕವಾಗಿ ನಡೆದುಕೊಂಡು ಆ ತತ್ವಗಳನ್ನು ಜೀವನ ಮೌಲ್ಯಗಳನ್ನಾಗಿಸಿಕೊಳ್ಳಬೇಕೆನ್ನುತ್ತಾರೆ. ಧರ್ಮ ಪ್ರತಿಯೊಬ್ಬ ಮನುಷ್ಯನಲ್ಲಿರುವ ಅಸುರೀ ಗುಣಗಳನ್ನು ತೊಡೆದು ಮಾನವೀಯ ಸದ್‌ಭಾವನೆಗಳನ್ನು ಜಾಗೃತಿಸುವುದು ಅದರ ಪರಮ ಗುರಿ ಎಂದು ತಿಳಿಸುವ ಬಸವಣ್ಣನವರು ಧರ್ಮವನ್ನು ವಿಕೃತಗೊಳಿಸುವುದು ಮಹಾಪರಾಧ ಎನ್ನುತ್ತಾರೆ. ಧರ್ಮಬಂಧು ಸಕಲ ಜೀವ ರಾಶಿಗಳಿಗೂ ಲೇಸು ಬಯಸುವ ಸಜ್ಜನನಾಗಿರಬೇಕೆಂದು ಬಯಸುವ ಬಸವಣ್ಣನವರು ಧರ್ಮದ ಹೆಸರಿನಲ್ಲಿ ಜರುಗುವ ಎಲ್ಲಾ ರೀತಿಯ ಹಿಂಸಾತ್ಮಕ ಕೃತ್ಯಗಳು ಅಜ್ಞಾನದ ಪರಮಾವಧಿಯ ಲಕ್ಷಣವೆಂದು ಪ್ರತಿಕ್ರಿಯಿಸುತ್ತಾರೆ.

ಇಂದು ಜಗತ್ತಿನಾದ್ಯಾಂತ ಸುಮಾರು ೫೮೦ ಮಿಲಿಯನ್ ಜನರು ಅಪೌಷ್ಟಿಕ ಆಹಾರ ಮತ್ತು ಹಸಿವಿನಿಂದ ಬಳಲುತ್ತಿದ್ದಾರೆ. ಸುಮಾರು ೫೨೦ ಮಿಲಿಯನ್ ವಯಸ್ಕರು ಅನಕ್ಷರತೆ, ೨೦೦ ಮಿಲಿಯನ್ ಮಕ್ಕಳು ವಿದ್ಯಾಭ್ಯಾಸವಿಲ್ಲದೆ ಬೀದಿ ಬದಿಯಲ್ಲಿ ಬದುಕುತ್ತಿರುವಂತಹ ದಿನಗಳಲ್ಲಿ ಧರ್ಮ ಧರ್ಮಗಳ ಮಧ್ಯೆ ಬದ್ಧ ದ್ವೇಷ ಮತ್ತು ಒಳಗುಂಪುಗಳನ್ನಾಗಿಸಿ ಕೊಂಡು ಅಜ್ಞಾನ ತೆರೆಯಲ್ಲಿ ಬದುಕುತ್ತಿರುವ ಶ್ರೀಮಂತ ಮತ್ತು ಬಡ ರಾಷ್ಟ್ರಗಳು ಇಂದು ಅಣ್ವಸ್ತ್ರ ಯೋಜನೆ, ಯುದ್ಧ ಸಾಮಾಗ್ರಿಗಳ ತಯಾರಿಕೆ ಮತ್ತು ಖರೀದಿಗಾಗಿ ಅಪಾರ ಹಣವನ್ನು ವೆಚ್ಚ ಮಾಡುತ್ತಿರುವುದೊಂದು ವಿಪರ್ಯಾಸವಾಗಿ ಕಾಣುತ್ತದೆ. ಈ ವಿಪರ್ಯಾಸಕ್ಕೆ ಧರ್ಮ-ಧರ್ಮಗಳ ಮಧ್ಯೆ ಬೆಳೆದಿರುವ ದ್ವೇಷ ಮತ್ತು ಭಿನ್ನತೆಗಳೇ ಮುಖ್ಯ ಕಾರಣವಾಗಿದೆ.

ಈ ಕಾರಣಕ್ಕಾಗಿ ಗುರು ಬಸವಣ್ಣನವರು ವಿಶ್ವಭ್ರಾತೃತ್ವ ತತ್ವ ಎಲ್ಲರ ಮನ, ಹೃದಯ ತುಂಬಬೇಕೆಂಬ ಇಚ್ಛೆ ವ್ಯಕ್ತಪಡಿಸುತ್ತಾರೆ.

*ನೆಲವೊಂದೆ ಹೊಲಗೇರಿ ಶಿವಾಲಯಕ್ಕೆ*
*ಜಲವೊಂದೆ ಶೌಚಾಚಮನಕ್ಕೆ*
*ಕುಲವೊಂದೆ ತನ್ನ ತಾನರಿದಂಗೆ*
*ಫಲವೊಂದೆ ಷಡುದರುಶನ ಮುಕ್ತಿಗೆ*
*ನಿಲವೊಂದೆ ಕೂಡಲಸಂಗಮದೇವಾ, ನಿಮ್ಮನರಿದವಂಗೆ*

ನಮ್ಮ ಎಲ್ಲಾ ಪೂಜಾಸ್ಥಳಗಳು ನಿರ್ಮಿತವಾಗುವುದು ಈ ಭೂಮಿಯ ಮೇಲೆಯೇ ಎಲ್ಲದಕ್ಕೂ ಈ ಭೂಮಿಯೇ ಆಧಾರ, ಹಾಗೇ ಪಂಚಭೂತ ತತ್ವಗಳಿಂದ ಜನ್ಮ ತಳೆದ ಪ್ರತಿಯೊಬ್ಬ ಮನುಷ್ಯನ ಮಾನಸಿಕ ಸಂವೇದನೆ ಒಂದೇ ರೀತಿಯಿಂದ ಕೂಡಿದೆ. ಪ್ರತಿಯೊಬ್ಬನ ಮನಸ್ಸು ದೇವರ ಸ್ಮರಣೆಯಲ್ಲಿ ಬಯಸುವುದು ಶಾಂತಿ-ನೆಮ್ಮದಿಯನ್ನೇ ಹೊರತು ಮತ್ತೇನೂ ಅಲ್ಲ! ಎಂದು ತಿಳಿಸುವ ಬಸವಣ್ಣನವರು ಯಾರು ಈ ಜಗದ ಸೂತ್ರಧಾರನಾದ ಪರಮಾತ್ಮನ್ನು ಅರಿತು ಆತನ ನಿಲುವಿನ ಪರಮಾನಂದ ಕಂಡುಕೊಳ್ಳುತ್ತಾನೆಯೊ ಆತನಿಗೆ ಈ ಜಗತ್ತು ಪರಮಾತ್ಮನ ಮೂರ್ತಿ ಸ್ವರೂಪದಂತೆ ಕಂಡು ಎಲ್ಲರೂ ಆತನಿಗೆ ಬಂಧುಗಳಂತೆ ಕಾಣುತ್ತಾರೆ ಎಂದು ತಿಳಿಸುತ್ತಾರೆ. ಎಲ್ಲರೂ ಆ ನಿಲುವಿನ ಆನಂದ ಪಡೆಯುವ ಪ್ರಯತ್ನ ಮಾಡಿದಲ್ಲಿ ಮಾನವ ನಿರ್ಮಿತ ಈ ಎಲ್ಲಾ ಅಸಮಾನತೆ, ದ್ವೇಷ-ಹಿಂಸೆಗಳಿಂದ ಅತಿ ಸುಲಭವಾಗಿ ಹೊರಬರಬಹುದೆಂದು ತಿಳಿಸುವ ಬಸವಣ್ಣನವರು ಆ ಕ್ಷಣದಲ್ಲಿಯೇ ಪರಸ್ಪರ ಪ್ರೀತಿ, ಪ್ರೇಮ, ವಿಶ್ವಾಸಪೂರ್ಣ ಶಾಂತಿಯ ಜಗತ್ತನ್ನು ಕಾಣಬಹುದೆಂದು ತಿಳಿಸುತ್ತಾರೆ.

*ಲಿಂಗವೊಂದೆ, ನಾಮಂಗಳು ಬೇರಾಗಿಹವಯ್ಯಾ*
*ಪರಮ ಪತಿವ್ರತೆಗೆ ಗಂಡನೊಬ್ಬನೆ*
*ಮತ್ತೊಬ್ಬರ ಬಳಿಗೆ ಹೋದಡೆ*
*ತನ್ನ ಗಂಡ ಮೂಗ ಕೊಯ್ಯದೆ ಮಾಣ್ಬನೆ ?*





ಜಗತ್ತಿನ ಸೃಷ್ಟಿಕರ್ತನಾದ ಪರಮಾತ್ಮನೆ ಎಲ್ಲರಿಗೂ ತಂದೆ, ಆತನ ನಾಮಂಗಳು ಬೇರೆಯಾಗಿದ್ದರೂ ಎಲ್ಲರ ಆಂತರ್ಯದಲ್ಲಿ ನೆಲೆಸಿರುವ ಪರಮಾತ್ಮನೊಬ್ಬನೆ ಎನ್ನುವ ಬಸವಣ್ಣನವರು ನಾಮಂಗಳು ಬೇರೆಯಾದ ಮಾತ್ರಕ್ಕೆ ಪರಮಾತ್ಮನು ಬೇರೆ ಬೇರೆಯಾಗಿರಲು ಸಾಧ್ಯವಿಲ್ಲ, ಆ ರೀತಿಯಲ್ಲಿ ಭಾವಿಸುವುದು ಸೃಷ್ಟಿಕರ್ತನ ಅಖಂಡತ್ವಕ್ಕೆ ಎಸೆಯುವ ದ್ರೋಹ ಎಂದು ಎಚ್ಚರಿಸುತ್ತಾರೆ. ಈ ರೀತಿಯ ಭಿನ್ನ ಭಾವಿಸುವವರಿಗೆ ಶಿಕ್ಷೆ ನಿಶ್ಚಿತವೆಂಬುದು ಬಸವಣ್ಣನವರ ಅಭಿಮತವಾಗಿದೆ.

*ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯಾ;*
*ಇವನಮ್ಮವ, ಇವನಮ್ಮವ ಇವನಮ್ಮವ*
*ಎಂದೆನಿಸಯ್ಯಾ*
*ಕೂಡಲಸಂಗಮದೇವಾ, ನಿಮ್ಮ ಮನೆಯ*
*ಮಗನೆಂದೆನಿಸಯ್ಯಾ*

ಬಸವಣ್ಣನವರ ದೃಷ್ಟಿಯಲ್ಲಿ ಇವನಾರು? ಎಂಬುದೇ ಅಪರಾಧವಾದುದು, ಅದು ಭಗವಂತನ ಅಸ್ತಿತ್ವಕ್ಕೆ ಕಳಂಕ ತಂದಂತೆ. ಇವನಾರು ಎಂಬ ಪ್ರಶ್ನೆಯಲ್ಲಿ ಮತ್ತ್ಯಾರೂ ಬೇರೆಯವರು ಇದ್ದಾರೆಂಬುದು ನಮ್ಮ ಸ್ವಾರ್ಥ ಮನಸ್ಸಿನ ಸಂಕೇತವೆಂದು ತಿಳಿಸುವ ಬಸವಣ್ಣನವರು ಎಲ್ಲರೂ ನಮ್ಮವ ರೆಂಬ ವಿಶಾಲಭಾವದ ಭ್ರಾತೃತ್ವ ಭಾವನೆಯನ್ನು ಅಳವಡಿಸಿ ಕೊಳ್ಳಲು ಕರೆ ನೀಡುತ್ತಾರೆ. ದೇವರ ಹೆಸರಿನಲ್ಲಿ ದ್ವೇಷದ ಬೀಜವನ್ನು ಬಿತ್ತುವುದು ಒಂದು ರೀತಿಯ ಮಾನಸಿಕ ವಿಕಾರ ಎನ್ನುವ ಬಸವಣ್ಣನವರು ಇದರಿಂದ ಮನುಷ್ಯನ ಬುದ್ಧಿ ಭಾವನೆಗಳು ವಿಕಾಸವಾಗದೆಂದು ಅರ್ಥೈಸುತ್ತಾರೆ.

ಯಾವುದೇ ರಾಷ್ಟ್ರ ಅಥವಾ ವ್ಯಕ್ತಿ ಬಾಳಿನುದ್ದಕ್ಕೂ ದ್ವೇಷ ಬುದ್ಧಿಯಿಂದ ಬದುಕಲು ಎಂದಿಗೂ ಸಾಧ್ಯವಿಲ್ಲ ಎನ್ನುವ ಬಸವಣ್ಣನವರು ಕೋಪ-ದ್ವೇಷ-ಹಿಂಸೆಯ ಅಗ್ನಿಕುಂಡಕ್ಕೆ ಭ್ರಾತೃತ್ವಭಾವದ ಅಮೃತಧಾರೆ ಎರೆಯುತ್ತಾರೆ. ಜಗತ್ತಿನಲ್ಲಿ ಅಸಾಧ್ಯವಾದುದನ್ನು ಪ್ರೀತಿ-ಪ್ರೇಮ-ವಿಶ್ವಾಸದ ಬಲದಿಂದ ಗೆಲ್ಲಲು ಸಾಧ್ಯವೆಂಬುದನ್ನು ಬಸವಣ್ಣನವರು ಸಾಧಿಸಿ ತೋರಿಸುತ್ತಾರೆ.

ಇಂದು ಜಾಗತೀಕರಣದ ಹೆಸರಿನಲ್ಲಿ ಪ್ರಬಲ ರಾಷ್ಟ್ರಗಳು ಬಡರಾಷ್ಟ್ರಗಳನ್ನು ತಮ್ಮ ತೆಕ್ಕೆಯ ಕಕ್ಷೆಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿವೆ. ಬಡರಾಷ್ಟ್ರಗಳು ಸಹ ಶ್ರೀಮಂತ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲಬೇಕೆಂಬ ಸದುದ್ದೇಶವಿಲ್ಲದೆ ತಮ್ಮ ಆದೇಶ ಪಾಲಿಸುವ ಗುಲಾಮರಾಷ್ಟ್ರಗಳಾಗುವಂತೆ ನೀತಿ-ನಿಯಮ ರೂಪಿಸಿಕೊಳ್ಳುವುದು ಬಸವಣ್ಣನವರ ದೃಷ್ಟಿಯಲ್ಲಿ ಅಕ್ಷಮ್ಯವಾದುದು.

*ಲೋಕದ ಡೊಂಕ ನೀವೇಕೆ ತಿದ್ದುವಿರಿ ?*
*ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ !*
*ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ !*
*ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ*
*ಕೂಡಲಸಂಗಮದೇವಾ.*

ಪ್ರತಿಯೊಬ್ಬ ವ್ಯಕ್ತಿ ಮೊದಲು ತನ್ನನ್ನು ಅವಲೋಕನ ಮಾಡಿಕೊಳ್ಳಬೇಕು. ತನ್ನ ಸರಿ-ತಪ್ಪುಗಳೆರಡನ್ನು ಗುರುತಿಸಿ ಕೊಂಡು ಸಾಗಿದರೆ ಯಾವುದೇ ಸಮಸ್ಯೆ ಪ್ರಶ್ನೆಗಳು ಉದ್ಭವವಾಗುವುದಿಲ್ಲ. ಆದರೆ ಅದನ್ನು ಬಿಟ್ಟು ಬೇರೆಯವರ ವಿಚಾರದಲ್ಲಿ ಸಲ್ಲದ ಅಹಂಕಾರದ ಹಸ್ತಕ್ಷೇಪ ನಡೆಸುವುದೇ ಜಗತ್ತಿನ ಅತಿ ದೊಡ್ಡ ಪ್ರಮಾದ ಎಂದು ತಿಳಿಸುವ ಬಸವಣ್ಣನವರ ಸಂದೇಶದಲ್ಲಿ ಪ್ರತಿಯೊಬ್ಬ ವ್ಯಕ್ತಿ ತಂತಮ್ಮ ಆತ್ಮವಿಮರ್ಶೆ ಮಾಡಿಕೊಳ್ಳಬೇಕೆಂಬ ಆಶಯವಿದೆ.

ವಿಶ್ವದೊಳಗೆ ಎಲ್ಲಾ ರಾಷ್ಟ್ರಗಳು ಪುಟ್ಟ ಪುಟ್ಟ ಮನೆಗಳಿದ್ದಂತೆ! ಎಲ್ಲರೂ ಪರಸ್ಪರ ಸ್ನೇಹವಿಶ್ವಾಸ ಪ್ರೀತಿಯಿಂದ ಬದುಕಿದ್ದರೆ ಈ ಸೃಷ್ಟಿಯ ಅಂದ ಅದೆಷ್ಟು ಚೆಂದ! ಆ ಅಂದ ಚೆಂದದ ಸಂತಸದ ಮಧುರ ಕ್ಷಣಗಳನ್ನು ಎಲ್ಲರೂ ಸ್ವಾನುಭಾವಿಸಿದಾಗಲೇ ಅದರ ಮಹತ್ವ ತಿಳಿಯುವಂತಹುದು. ವಿಶ್ವಶಾಂತಿಯ ನಿಟ್ಟಿನಲ್ಲಿ ಎಲ್ಲಾ ರಾಷ್ಟ್ರಗಳು ದಾರ್ಶನಿಕರ ವಿಚಾರಗಳಿಗೆ ಆದ್ಯತೆ ನೀಡಿ ಅವುಗಳನ್ನು ಒಮ್ಮತದಿಂದ ಅನುಸರಿಸಬೇಕಾಗಿದೆ. ಈ ಹಾದಿಯಲ್ಲಿ ಅಲ್ಪಮಟ್ಟಿನ ಯಶಸ್ಸು ಸಿಕ್ಕಿದರೂ ಸಹ ಜಗತ್ತು ಶಾಂತಿ ನೆಮ್ಮದಿಯ ತಾಣವಾಗುವುದರಲ್ಲಿ ಸಂಶಯವಿಲ್ಲ. ಈ ಎಲ್ಲಾ ಕಾರಣದಿಂದ ಗುರು ಬಸವಣ್ಣನವರು ನಿರೂಪಿಸಿರುವ ಮಾನವೀಯ ತತ್ವ ಸಂದೇಶಗಳು ವಿಶ್ವಶಾಂತಿಯ ಮಹಾಮನೆಗೆ ಹೆಬ್ಬಾಗಿಲು ಇದ್ದಂತೆ ! ಬಸವ ಜಯಂತಿಯ ಸಂದರ್ಭದಲ್ಲಿ ನಾವುಗಳು ಅವರು ನೀಡಿದ ಮಾನವೀಯ ಮೌಲ್ಯ ಸಂದೇಶಗಳನ್ನು ಅರ್ಥೈಸಿಕೊಂಡು ಅನುಷ್ಠಾನ ತತ್ಪರರಾಗುವುದು ಅತ್ಯಂತ ಪ್ರಸ್ತುತವಾಗಿದೆ. ❑

# ಶ್ರೀ ಶಂಕರಾಚಾರ್ಯರು

-ಯು.ಎಸ್. ಸಂಗನಾಳಮಠ *

ಎಂಟನೆಯ ವರ್ಷದೊಳಗೆ ವೇದಾಧ್ಯಯನಗಳನ್ನು ಪೂರೈಸಿ, ಹನ್ನೆರಡನೆಯ ವಯಸ್ಸಿಗೆ ಸಕಲ ಶಾಸ್ತ್ರಗಳನ್ನು ಪರಿಚಯ ಮಾಡಿಕೊಂಡು ಹದಿನಾರನೆಯ ವಯಸ್ಸಿಗೆ ವೇದಾಂತ ಭಾಷ್ಯವನ್ನು ಬರೆದು ಮೂವತ್ತೆರಡನೆಯ ವಯಸ್ಸಿಗೆ ಅನೇಕ ಕೃತಿಗಳನ್ನು ರಚಿಸಿ, ತಮ್ಮ ಇಹಲೋಕದ ಕರ್ತವ್ಯ ಪೂರೈಸಿ ನಿರ್ಗಮಿಸಿದ ಈ ಅಸಾಮಾನ್ಯ ಪ್ರಜ್ಞೆಯ ಸಾಧಕ ಯಾರು ಎನ್ನುವುದಕ್ಕೆ ಉತ್ತರ ಆದಿಶಂಕರರು. ಇವರ ಜನನ ಜೀವಿತ ಕಾಲದ ಬಗ್ಗೆ ನಿಖರವಾದ ಅಭಿಪ್ರಾಯಗಳು ಇಲ್ಲ. ಹಲವಾರು ಪಾಶ್ಚಾತ್ಯ ಮತ್ತು ನಮ್ಮ ದೇಶದ ವಿದ್ವಾಂಸರ ಪ್ರಕಾರ ಕ್ರಿ.ಶ. ೭೮೮ ರಿಂದ ಕ್ರಿ.ಶ. ೮೨೦. ಇನ್ನು ಕೆಲವರು ಕ್ರಿ.ಶ. ೬೮೮ರಿಂದ ೭೨೦ ಎನ್ನುತ್ತಾರೆ. ಅವರ ಜೀವಿತಾವಧಿ ೩೨ ವರ್ಷ. ಅವರ ಜನನ ದಿನ ವೈಶಾಖ ಶುಕ್ಲ ಪಂಚಮಿ. ಇವುಗಳ ಬಗ್ಗೆ ವಿವಾದವಿಲ್ಲ. ಶ್ರೀ ಶಂಕರರ ಹುಟ್ಟೂರು ಕೇರಳದ ಕುತ್ತನಾಡಿಗೆ ಸೇರಿದ ಕಾಲಡಿ. ತಂದೆ ಶಿವಗುರು ತಾಯಿ ವಿಶಿಷ್ಟಾದೇವಿ. ಶಿವನ ಕೃಪೆಯಿಂದ ಹುಟ್ಟಿದುದರಿಂದ 'ಶಂಕರ' ಎಂಟನೆಯ ವಯಸ್ಸಿಗೆ ಸನ್ಯಾಸ ಸ್ವೀಕರಿಸಿ ನರ್ಮದಾ ತೀರದಲ್ಲಿದ್ದ ಗೋವಿಂದ ಭಗವತ್ಪಾದರನ್ನು ಗುರುಗಳನ್ನಾಗಿ, ಆ ಸೇತು ಹಿಮಾಲಯದವರೆಗೆ ಎರಡು ಸಲ ಸಂಚರಿಸಿ, ಹಿಂದೂ ಧರ್ಮ ಪುನರುತ್ಥಾನಕ್ಕಾಗಿ ಶೃಂಗೇರಿ, ಪುರಿ, ದ್ವಾರಕ, ಬದರಿನಾಥಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿ ಅದ್ವೈತ ಪ್ರತಿಪಾದಕರಾಗಿ, ಕಾಶ್ಮೀರದಲ್ಲಿ ಸರ್ವಜ್ಞ ಪೀಠಾರೋಹಣ ಮಾಡಿ, ಬದರಿಕ್ಷೇತ್ರದ ಗುಹೆಯಲ್ಲಿ ಯೋಗನಿಷ್ಠರಾಗಿ ಸಮಾಧಿಸ್ಥರಾದರು.

ಡಾ|| ರಾಧಾಕೃಷ್ಣನ್ ಆದಿಶಂಕರರ ಬಗ್ಗೆ 'ಇವರು ತತ್ವಜ್ಞಾನಿ, ಕವಿ, ಸಂತ, ವಿದ್ವಾಂಸ, ಅನುಭಾವಿ, ಧಾರ್ಮಿಕ ಸುಧಾರಕರು, ಸರ್ವಮಾನ್ಯ ಬುದ್ಧಿಶಕ್ತಿಯ ಇಂಥವರು ಅತಿ ವಿರಳ- ಚಿಂತನಶೀಲರ ಮೇಲೆ ಹಿಡಿತವನ್ನು ಸಾಧಿಸಬಲ್ಲ ಯಾವುದಾದರೂ ಮತವಿದ್ದರೆ ಅದು ತರ್ಕಬದ್ಧ, ವೈಚಾರಿಕತೆಯುಳ್ಳ ಅದ್ವೈತ ಮತ' ಆರ್ಥರ್ ಡಿಸನ್ಬರ್ಗ್ ಎಂಬ ಪಾಶ್ಚಾತ್ಯ ಚಿಂತಕನ ಪ್ರಕಾರ- ಶಂಕರರು ತಮ್ಮ ಅತ್ಯಲ್ಪ ಕಾಲದ ಜೀವಿತಾವಧಿಯಲ್ಲಿ ಸಾಧಿಸಿದ್ದು ಅಪಾರ ಸಾಮಾನ್ಯರು ಕೆಲಸವೊಂದನ್ನು ನಿರ್ವಹಿಸಲು ಹಲವು ದಿನಗಳನ್ನು ತೆಗೆದುಕೊಂಡರೆ ಶಂಕರರಿಗೆ ಕೆಲವೇ ಘಂಟೆಗಳು ಸಾಕಾಗಿತ್ತು'.

ಮಾನವ ಸಂಕುಲ ವಿವಿಧತೆಯನ್ನು ಪುರಸ್ಕರಿಸುವುದು ತಪ್ಪಲ್ಲ ಏಕರೂಪತೆಯನ್ನು ಹೇರುವುದು ಒಳಿತಲ್ಲ. ಆದರೆ ವಿವಿಧತೆಗಳಲ್ಲಿ ಏಕತೆಯನ್ನು ಸಾಧಿಸುವುದು ಅತಿ ಮುಖ್ಯ ಎಂಬುದು ಶಂಕರರ ವಿಚಾರವಾಗಿತ್ತು.

ಆದಿ ಶಂಕರರು ಜನಿಸಿದ ಕಾಲದಲ್ಲಿ ವೇದಗಳನ್ನು ಅಪಾರ್ಥವಾಡಿಕೊಂಡು ಕರ್ಮಾಚರಣೆಗಳಿಗೆ ಪ್ರಾಧಾನ್ಯತೆ ನೀಡಿ ಅವುಗಳ ಅಂತರಾರ್ಥವನ್ನು ಕಡೆಗಣಿಸಿದ ಕಾಲ. ಯಜ್ಞಯಾಗಾದಿಗಳಿಗೆ ಪ್ರಾಮುಖ್ಯತೆ ನೀಡಿದ್ದರು. ಅಂಧ ಶ್ರದ್ಧೆ ವ್ಯಾಪಕವಾಗಿತ್ತು. ಆಗ ಶಂಕರರು ವೇದಗಳ ಅಂತರಾರ್ಥ ವಿವರಿಸಿದರು. ಯಜ್ಞಗಳು ವೇದಗಳ ಅಂಗಗಳು ಅವೇ ಪ್ರಧಾನವಲ್ಲ. ಮನುಷ್ಯನ ಅಭಿವೃದ್ಧಿಗೆ ಜ್ಞಾನಮಾರ್ಗದ ಅವಶ್ಯಕತೆ ಇದೆ ಎಂದರು. ವಿವಿಧ ಮತಗಳ ಲೋಪದೋಷಗಳನ್ನು ತೋರಿಸಿದರು. ಅಲ್ಲಿಯ ಅನಿಷ್ಟ ಪದ್ಧತಿಗಳನ್ನು ದೂರ ಸರಿಸಿದರು. ಶಂಕರರ ಬೋಧನೆಗೆ ಆಧಾರ ಉಪನಿಷತ್ತುಗಳು. 'ಬ್ರಹ್ಮಜ್ಞಾನಿಯಾದವನು ಬ್ರಾಹ್ಮಣನೇ ಆಗಲಿ ಚಾಂಡಾಲನೇ ಆಗಲಿ ಅವನೇ ನನ್ನ ಗುರು' ಎಂದರು. ಜ್ಞಾನಾಧಾರಿತ ವ್ಯಕ್ತಿಯನ್ನು ಗೌರವಿಸಿದರು.

'ತನ್ನಲ್ಲಿದ್ದುದರಲ್ಲಿಯೇ ತೃಪ್ತಿ ಹೊಂದಿ ಜೀವನ ಸಾಗಿಸುವ ಬಡವನೇ ನಿಜವಾದ ಶ್ರೀಮಂತ. ತನ್ನಲ್ಲಿಯ ಸಂಪತ್ತು ಇನ್ನೂ ಹೆಚ್ಚಾಗಬೇಕು ಎಂದು ಆಶೆ ಪಡುವವನೇ ನಿಜವಾದ ಬಡವ ಎಂದಿದ್ದಾರೆ.

ಬೌದ್ಧರು ತಮ್ಮ ವೈದಿಕ ವಿಚಾರಗಳನ್ನು ವಿಭಿನ್ನವಾಗಿ ಅರ್ಥೈಸಿದರು. ಒಂದರ್ಥದಲ್ಲಿ ನಾಸ್ತಿಕವಾದವನ್ನು ಪ್ರತಿಪಾದಿಸಿದರು. ಮೂರ್ತಿಪೂಜೆ ವಿರೋಧಕರಾದರು. (ಬುದ್ಧ, ಈಗ ಮೂರ್ತಿಯ ರೂಪದಲ್ಲಿ ಪೂಜಿತನಾಗಿದ್ದಾನೆ) ಆದಿಶಂಕರರು ಬೌದ್ಧ ಸಿದ್ಧಾಂತದ ಶೂನ್ಯವಾದದ ದೋಷಗಳನ್ನು ತೋರಿಸಿ ವಾದಗಳಲ್ಲಿ ಅವರನ್ನು ಸೋಲಿಸಿದರು.

ಆದಿಶಂಕರರು ರಚಿಸಿದ ಗ್ರಂಥಗಳನ್ನು ಮೂರು ಪ್ರಧಾನ ಭಾಗಗಳನ್ನಾಗಿ ವಿಂಗಡಿಸಬಹುದು. 1) ಭಾಷ್ಯಗಳು 2) ಸ್ತೋತ್ರಗಳು 3) ಪ್ರಕರಣ ಗ್ರಂಥಗಳು. ಅವರ 'ಪ್ರಸ್ಥಾನತ್ರಯಿ' ಭಾಷ್ಯ ಪ್ರಸಿದ್ಧ ಅನೇಕ ದೇವರುಗಳ 250 ಸ್ತೋತ್ರಗಳು ರಚಿತವಾಗಿವೆ. ಹಾಗೆ ನದಿಗಳ ಬಗ್ಗೆ ನರ್ಮದಾಷ್ಟಕ, ಗಂಗಾಷ್ಟಕ, ಯಮುನಾಷ್ಟಕ ಸ್ತೋತ್ರಗಳು ಇವೆ. ಸೌಂದರ್ಯಲಹರಿ ಅತಿ ವಿಶಿಷ್ಟವಾದದ್ದು. ಮಾನವ ದೇಹದಲ್ಲಿಯ ಷಟ್‌ಚಕ್ರಗಳಲ್ಲಿ ದೇವಿ ವಿರಾಜಮಾನಳಾಗಿದ್ದು ನಾನಾ ರೂಪಗಳ ವರ್ಣನೆಯನ್ನು ಪಾಂಡಿತ್ಯಪೂರ್ಣವಾಗಿ ಮಾಡಿದ್ದಾರೆ. ನಿದ್ರಿತ ಕುಂಡಲಿನಿ ಶಕ್ತಿಯನ್ನು ಜಾಗ್ರತಿಗೊಳಿಸುವ ಸಾಧನಾ ಮಾರ್ಗವನ್ನು ತೋರಿಸಿದ್ದಾರೆ. ಸೌಂದರ್ಯಲಹರಿ ಸುಂದರ ಕಾವ್ಯ. ಇದರಲ್ಲಿ ತಂತ್ರ ಶಾಸ್ತ್ರದ ಖಗೋಳಶಾಸ್ತ್ರದ ರಹಸ್ಯಮಯ ತತ್ವಗಳನ್ನು ಹೇಳಿದ್ದಾರೆ. ಶ್ರೀಶಂಕರರು ತಮ್ಮ ಚಿಂತನೆಗಳಲ್ಲಿ, ಗುರುತ್ವಾಕರ್ಷಣ ಶಕ್ತಿಯ ಬಗ್ಗೆ ಪ್ರತಿಪಾದಿಸಿದ್ದಾರೆ. ವೇದಗಳಲ್ಲಿ ಬರುವ 'ಗುರುಲಾಘವ ಸಿದ್ಧಾಂತ'ವನ್ನು ವಿಶ್ಲೇಷಣ ಮಾಡಿ ಭೂಮಿ ಸೂರ್ಯರ ಸುತ್ತ ತಿರುಗುವುದು ಎಂಬ ಸತ್ಯವನ್ನು ಗೆಲಿಲಿಯೋ ಕೋಪರ್ನಿಕಸ್‌ರಿಗಿಂತ ಮೊದಲೇ ಹೇಳಿದ್ದಾರೆ. ಪ್ರೋಟಾನ್, ಎಲೆಕ್ಟ್ರಾನ್‌ಗಳು ಸಾಮ್ಯವೆಂಬ ಸತ್ಯದಂತೆ ಆತ್ಮದ ಹಂತದಲ್ಲಿ ಮನುಷ್ಯರೆಲ್ಲ ಒಂದೇ ಎಂಬ ಸತ್ಯವನ್ನು ಸ್ಪಷ್ಟಪಡಿಸಿದ್ದಾರೆ.

ಆದಿಶಂಕರರ ಜೀವನದಲ್ಲಿ ಮಂಡನ ಮಿಶ್ರ ಅಥವಾ ವಿಶ್ವರೂಪ ವಿದ್ವಾಂಸರೊಡನೆ ವಾದ ಮಾಡಿ ಜ್ಞಾನ ಕಾಂಡದ ಶ್ರೇಷ್ಠತೆ ಬಗ್ಗೆ ಸಮರ್ಥ ರೀತಿಯಲ್ಲಿ ಪ್ರತಿಪಾದಿಸಿದ್ದು ಅದ್ವಿತೀಯ ಪ್ರಸಂಗ. ವಿಶ್ವರೂಪರ ಪತ್ನಿ ಉಭಯ ಭಾರತಿಯೊಡನೆ ನಡೆದ ವಾದದಲ್ಲಿ ಶ್ರೀಶಂಕರರಿಗೆ ಕಾವ್ಯ ಶಾಸ್ತ್ರದ ವಿಷಯದಲ್ಲಿ ಪ್ರಶ್ನೆ ಕೇಳಿದಾಗ, ಒಂದು ತಿಂಗಳ ಅವಕಾಶವನ್ನು ಬೇಡಿ, ಮೃತನಾದ ಅಮರುಕನೆಂಬ ರಾಜನ ದೇಹದಲ್ಲಿ ಪರಕಾಯ ಪ್ರವೇಶಮಾಡಿ ಮನ್ಮಥ ಕಲೆಗಳನ್ನು ಅರಿತು, ನಂತರ ಉಭಯಭಾರತಿಯನ್ನು ಸೋಲಿಸಿದರು. ಪರಕಾಯ ಪ್ರವೇಶ ಮಾಡಿ 'ಜ್ಞಾನ' ಹೊಂದಿ ಪುನಃ ಸಂವೇಹಿಯಾದದ್ದು ವಿಸ್ಮಯ ಘಟನೆ. ಉಭಯಭಾರತಿ ಶ್ರೀಶಂಕರರಿಗೆ ಪರಮೇಶ್ವರನ ಅವತಾರ ಎಂದು ಹೇಳಿ ಅವರ ಪಾಂಡಿತ್ಯಕ್ಕೆ ಮೆಚ್ಚಿ ತಾನು ದುರ್ವಾಸರ ಶಾಪಗ್ರಸ್ತೆ ಎಂದು ಬ್ರಹ್ಮಲೋಕಕ್ಕೆ ತೆರಳಲು ಸಿದ್ಧಳಾದಳು. ಶ್ರೀಶಂಕರರು ತಮ್ಮ ಅಂತರ್‌ಜ್ಞಾನ ದಿಂದ ಅವಳು ಸರಸ್ವತಿ ಎಂದು ತಿಳಿದು, ತಾವು ಪ್ರತಿಷ್ಠಾಪಿಸ ಲಿರುವ ಮಠಗಳಲ್ಲಿ ನೆಲಸು ಎಂದು ಬೇಡಿಕೊಂಡರು. ಅದುವೇ ಶ್ರೀ ಶಾರದಾದೇವಿ ಶೃಂಗೇರಿ ಮಠ.

'ಮೃತ್ಯು ಸಮೀಪವಿದ್ದಾಗ ವ್ಯಾಕರಣ ನಿಯಮಗಳು ಯಾರನ್ನೂ ರಕ್ಷಿಸುವುದಿಲ್ಲ. ಬದುಕಿರುವಾಗಲೇ ಪರಿಶುದ್ಧ ಮತ್ತು ಪರಿಪೂರ್ಣ ಆದ ಸ್ಥಿತಿ ತಿಳಿಯುವುದಕ್ಕಾಗಿ ಶ್ರಮಿಸಿ' ಎಂದಿದ್ದಾರೆ.

ಆದಿ ರೇಣುಕಾಚಾರ್ಯರು ಪುನಃ ಕಲಿಯುಗದಲ್ಲಿ ಶ್ರೀ ರೇವಣಸಿದ್ಧರೆಂಬ ಹೆಸರಿನಿಂದ ಅವತರಿಸಿ 1400 ವರ್ಷಗಳವರೆಗೆ ವೀರಶೈವ ತತ್ವೋಪದೇಶ ಮಾಡಿದರು. ಶ್ರೀ ಆದಿಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗ, ರತ್ನಗರ್ಭ ಗಣಪತಿ ದಯಪಾಲಿಸಿದರು ಎಂಬುದು ಶೃಂಗೇರಿ ಪೀಠದ ಆಸ್ಥಾನ ವಿದ್ವಾಂಸರಾದ ಪಂ. ಕಾಶಿ ಲಕ್ಷಣಶಾಸ್ತ್ರಿಗಳಿಂದ ರಚಿತವಾದ 'ಗುರುವಂಶ' ಕಾವ್ಯದಲ್ಲಿ 'ಸುಸಿದ್ಧ, ದತ್ತಂ ಚಂದ್ರಮೌಳೀಶ್ವರಲಿಂಗಂ' ಎಂದು ಉಲ್ಲೇಖಿತವಾಗಿದೆ. (ಸುಸಿದ್ಧ ಎಂದರೆ ರೇವಣಸಿದ್ಧ ಎನ್ನಲಾಗಿದೆ) ಶ್ರೀ ಚಂದ್ರಮೌಳೀಶ್ವರಲಿಂಗಮಸ್ಮೈ ಸದ್ರತ್ನ ಗರ್ಭ ಗಣನಾಯಕಂ ಚ । ಸ ವಿಶ್ವರೂಪಾಯ ಸುಸಿದ್ಧದತ್ತಂ ದತ್ವಾಸ್ತ ಗಾವೀಚ್ಛೆರಮರ್ಚಯೇ ತಿ'

(ಗುರುವಂಶಕಾವ್ಯ 3–33)

ಭಗವಾನ್ ಶಂಕರರು ಸರ್ವಶ್ರೇಷ್ಠಯತಿಗಳು, ವೈರಾಗ್ಯ ಚಕ್ರವರ್ತಿಗಳು, ಸಮಾಜೋದ್ಧಾರಕರು, ಅದ್ವೈತ ಪ್ರತಿಪಾದಕರಾಗಿದ್ದರು. □

* ಉಪನ್ಯಾಸಕರು–ಲೇಖಕರು, 'ಜ್ಯೋತಿರ್ಲಿಂಗ' ಶಿವಮೊಗ್ಗ ರಸ್ತೆ, ೧ನೇ ಒಳತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ.

## ಪ್ರಾರಬ್ಧಕ್ಕಿಂತ ಪ್ರಯತ್ನ ಮಿಗಿಲು

-ರಮೇಶ್‌ಬಾಬು ಯಾಳಗಿ ಸಗರ *

ಸಕಲ ಪ್ರಾಣಿಗಳಲ್ಲಿ ಮನುಷ್ಯ ಶ್ರೇಷ್ಠ ಪ್ರಾಣಿ. ಕಾರಣ ಅವನಲ್ಲಿ ವಿಚಾರಿಸುವ ವಿವೇಕವಿದೆ ಯಾವುದನ್ನು ಮಾಡಬೇಕು ಮಾಡಬಾರದು ಯಾವುದನ್ನು ಆಚರಿಸಿದರೆ ಒಳ್ಳೆಯದು. ದುರಾಚಾರ, ಸದಾಚಾರ ಎಂದರೇನು ಮೌಢ್ಯ ಮಾನವೀಯತೆ ಅನುಕರುಣೆ ಅಂಧಾನುಕರಣೆ ಬೇಕು ಬೇಡ ಒಳ್ಳೆಯದು ಕೆಟ್ಟದ್ದು ಸರಿ ತಪ್ಪು ನ್ಯಾಯ ಅನ್ಯಾಯ ಧರ್ಮ, ಅಧರ್ಮ ಸತ್ಯ ಮಿಥ್ಯಗಳನ್ನು ಕುರಿತು ಆಲೋಚಿಸುವ ಶಕ್ತಿ ಮಾನವನಿಗಿದೆ.

ದೇಶದ ಪ್ರಗತಿಗೆ ಬೇಕಾಗಿರುವುದು ಒಂದು ಸುಜ್ಞಾನ ಇನ್ನೊಂದು ವಿಜ್ಞಾನ ಇವೆರಡು ಅಭಿವೃದ್ಧಿಯ ಚಕ್ರಗಳೇ ಆದ್ದರಿಂದ ವೈಚಾರಿಕವಾಗಿ, ವೈಜ್ಞಾನಿಕವಾಗಿ ವಿಶಾಲಾತ್ಮಕವಾಗಿ ವಿಚಾರಿಸುವ ಶಕ್ತಿ ಸರ್ವರಲ್ಲಿ ಬೆಳೆಯಬೇಕಾಗಿದೆ.

ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಬದಲಾವಣೆಯಾಗಬೇಕು. ಚಲನಶೀಲತೆಯನ್ನು ಕಳೆದುಕೊಳ್ಳಬಾರದು, ಸುಧಾರಣೆಯ ಪರವಾದ ಎಲ್ಲ ಮನಸ್ಸುಗಳು ವಿಚಾರ ಮಾಡಬೇಕಾಗಿದೆ. ಬದುಕಿನ ಬೆಲೆಗಳನ್ನು ಹುಡುಕುವ ಹಾದಿಯಲ್ಲಿ ಮೌಲ್ಯಗಳನ್ನು ಜನರಿಗೆ ಮುಟ್ಟಿಸಬೇಕಾಗಿದೆ. ಬುದ್ಧಿ ಪ್ರಧಾನವಾದ ವೈಚಾರಿಕತೆ ಬೆಳೆದು ಬರಬೇಕಾಗಿದೆ ಅರಿವಿಂಗೆ ಹಿರಿದು ಕಿರಿದುಂಟೆ? ಬದುಕನ್ನು ಸಂಪನ್ನಗೊಳಿಸುವ ತಿದ್ದಿ, ತೀಡಿ ಒಪ್ಪಹೂರಣ ಮಾಡುವ ವಿಚಾರಗಳು ಅರಿವಿನಿಂದ ಮೂಡಬೇಕಾಗಿದೆ. 'ಪ್ರಾರಬ್ಧಕಿಂತ ಪ್ರಯತ್ನವೇ ಮಿಗಿಲು' ಎಂದು ಪ್ರಯತ್ನ ಶೀಲರಾಗಬೇಕು. ದೈವವನೆಂಬಿ ಕೈಕಟ್ಟಿ ಕುಳಿತರೆ ಸಾಲದು ಫಲಾಫಲ ನಿರೀಕ್ಷಿಸದೇ ಯತ್ನವ ಮಾಡುತ್ತಲೇ ಮರಳಿ ಯತ್ನವ ಮಾಡುತ್ತ ಇರಬೇಕು ಮರಣದಂತಹ ಮಹಾನವಮಿ ಬರುವವರಿಗೆ.

*ಶಕುನವೆಂಬೆ ಅಪಶಕುನವೆಂಬೆ*
*ನಿಮ್ಮವರು ಅಳಲಿಕೆ ಅಂದೇಕೆ ಬಂದೆ ?*
*ನಿಮ್ಮವರು ಅಳಲಿಕೆ ಇಂದೇಕೆ ಹೋದೆ ?*
*ನೀ ಹೋಹಾಗಳಕ್ಕೆ ನೀ ಬಾಹಾಗಳಕ್ಕೆ*
*ಅಕ್ಕೆ ಬಾರದ ಮುನ್ನ ಪೂಜಿಸು ಕೂಡಲಸಂಗಮದೇವಾ*

ಅಂಧಶ್ರದ್ಧೆಯ ಗತಾನುಗತಿಕ ನಂಬಿಕೆಯ ಕಂತೆಗಳೇ ಶಕುನಗಳು ಶಕುನವೆಂದರೆ ಮೂಢನಂಬಿಕೆ ಎಂದು ತಿರಸ್ಕರಿಸಬೇಕಾಗಿದೆ ಆತ್ಮವಿಶ್ವಾಸದಿಂದ ಸತ್ಯನಿಷ್ಠಕಾಯಕದಿಂದ ಅಂತರಾಳದ ಅರಿವಿನಿಂದ ಯಾರು ಬಾಳು ಸಾಗಿಸುವರು ಅವರ ಬಾಳು ಬೆಳಕಾಗುತ್ತದೆ. ಸುಖ ಬಂದರೆ ಶುಭ ಶಕುನ ಎನ್ನುವರು ನಿರಾಶೆಹೊಂದಿ ದುಃಖದಿಂದ ಗೋಳಾಡುವುದನ್ನು ಕಂಡರೆ(Bad luck) ಅಪಶಕುನ ಎನ್ನುವರು.

ಶುಭಶಕುನ ಅಶುಭಶಕುನ ಎಂದು ಹೇಳುವಲ್ಲಿ ಭಾವನೆ ಮುಖ್ಯವೇ ಹೊರರು ಶಕುನಗಳಲ್ಲ! ಸುಖ, ದುಃಖ ಕಲ್ಪನೆ ಭ್ರಮೆಯಿಂದ ಇದು ಹುಟ್ಟಿದೆ ಮಾನಸಿಕ ಸಾಮರ್ಥ್ಯವಿಲ್ಲದ ವ್ಯಕ್ತಿ ಶಕುನಗಳ ಮೇಲೆ ನಂಬಿಕೆ ಇಟ್ಟು ಮನೋದೌರ್ಬಲ್ಯಕ್ಕೆ ಒಳಗಾಗುತ್ತಾನೆ.

ನಮಗೆ ಬೇಕಾದುದು ಬಂದರೆ ಸುಖ ಬೇಡವಾದದ್ದು ಬಂದರೆ ದುಃಖ, ಕಷ್ಟಸುಖ ಯಾವುದು ಶಾಶ್ವತವಲ್ಲ ವಿಚಾರಿಸಿ ನೋಡಿದರೆ ನಾವೇ ಶಾಶ್ವತವಲ್ಲ ಪ್ರತಿಯೊಂದು ಸಮಸ್ಯೆಯನ್ನು ಪ್ರಯತ್ನದಿಂದ ಪರಿಹರಿಸಿಕೊಳ್ಳಬೇಕೇ ವಿನಃ ಮೂಢನಂಬಿಕೆಗಳಿಂದಲ್ಲ.

ಹಲ್ಲಿ ಮೇಲೆ ಬಿದ್ದರೆ, ಖಾಲಿಕೊಡ ಎದುರಿಗೆ ಬಂದರೆ, ಕಣ್ಣುರೆಪ್ಪೆ ಬಡಿದರೆ, ಬೆಕ್ಕು ಅಡ್ಡಬಂದರೆ ಕೆಲವರು ಪ್ರಮುಖ ಕಾರ್ಯಗಳನ್ನು ಮುಂದೂಡುವರು. ತಮ್ಮ ತಲೆಯಲ್ಲಿಯ ಹಳೆಯ ನಂಬಿಕೆಗಳಿಂದ ಮನಸ್ಸು ಪೂರ್ವಗ್ರಹ ದೋಷದಿಂದ ಭ್ರಾಂತಿಗೊಳಗಾಗಿ ವಿಚಾರಶೂನ್ಯರಾಗಿ ವರ್ತಿಸುತ್ತಾರೆ.

*ಲಗ್ನವೆಲ್ಲಿಹದೋ ವಿಘ್ನವೆಲ್ಲಿಹದೋ ಸಂಗಯ್ಯ*

* ರಾಜ್ಯಶಾಸ್ತ್ರ ಉಪನ್ಯಾಸಕರು, ಶ್ರೀಮತಿ ಆರ್. ಸುಭದ್ರಮ್ಮ ವಿಠೋಬಶೆಟ್ಟಿ ಮಹಾವಿದ್ಯಾಲಯ, ಮಾನವಿ-೫೮೪೧೨೩.





*ದೋಷವೆಲ್ಲಿಹದೋ ದುರಿತವೆಲ್ಲಿಹದೋ ಸಂಗಯ್ಯ*
*ನಿಮ್ಮ ಮಾಣದೆ ನೆನೆವಂಗೆ ಭಾವಕರ್ಮವೆಲ್ಲಿಹದೋ*
*ಕೂಡಲಸಂಗಮದೇವಾ*

ಶುಭವಿಲ್ಲ, ಅಶುಭವಿಲ್ಲ, ದೋಷವಿಲ್ಲ, ದುರಿತವಿಲ್ಲ, ಪಾಪವಿಲ್ಲ, ಪುಣ್ಯವಿಲ್ಲ ನಿಮ್ಮ ನಂಬುದೇ ಇವುಗಳು ಎಲ್ಲವೂ ಸೃಷ್ಟಿಯಾಗಿವೆ. ಆತ್ಮವಿಶ್ವಾಸಿಯಾದವರಿಗೆ ಲಗ್ನಗಳ ಶುಭಾಶುಭ ಪರಿಣಾಮವಿಲ್ಲ, ದುರಿತ ದೋಷಗಳಿಲ್ಲ ಜನನ ಮರಣದ ಭಯವೇ ಇಲ್ಲ. ಜೀವನ ನಿಷ್ಠೆ, ಆತ್ಮವಿಶ್ವಾಸ, ಅರಿವು, ಆಚಾರಗಳೇ ಜೀವನ ಮೌಲ್ಯಗಳು. ನಿಮ್ಮ ನೆನೆದವಂಗೆ ಯಾವ ಪೂರ್ವಗ್ರಹ ಪೀಡಿತ ವಿಚಾರಗಳು ಸುಳಿಯುವುದಿಲ್ಲ. ದೃಢವಾದ ನಂಬಿಕೆಯು ಕೊರತೆ, ಇವುಗಳಿಗೆಲ್ಲ ಕಾರಣೀಭೂತವಾಗಿವೆ.

*ಕಣ್ಣು ಮುಚ್ಚಿ ಕನ್ನಡಿಯ ತೋರುವಂತೆ*
*ಇರುಳು ಹಗಲಿನ ನಿದ್ರೆ ಸಾಲದೆ ?*
*ಬೆರಳನೆಣಿಸಿ ಪರಮಾರ್ಥವ ಹಡೆದೊಡೆ*
*ಚೋದ್ಯವಲ್ಲವೆ? ಹೇಳಾ? ಮೂಗ ಮುಚ್ಚಿ*
*ಮುಕ್ತಿಯ ಬಯಸುವ ನಾಚಿಕೆಯಿಲ್ಲದವರ*
*ನಾನೇನೆಂಬೆ ಕೂಡಲಸಂಗಮದೇವಾ*

ಕಣ್ಣುಮುಚ್ಚಿ ಕನ್ನಡಿ ತೋರಿಸಿದರೆ ಏನುಂಟು ಕಣ್ಣನ್ನು ಕಟ್ಟಿ ಕನ್ನಡಿ ಮುಂದೆ ನಿಲ್ಲಿಸಿದರೆ ಅವನ ಮುಖದಲ್ಲಿರುವ ಕಂದು ಕಲೆಯಾಗಲಿ ಅವನ ಹಾವಭಾವವಾಗಲಿ, ವಿಲಾಸ ವಿಭ್ರಮಗಳಾಗಲಿ ಕಾಣಲಾರವು ಅಂತರಂಗದಲ್ಲಿ ಶಿವಜ್ಞಾನವಿರುವಾಗ ಬಹಿರಂಗದಲ್ಲಿ ಭಕ್ತಿಯನ್ನು ಮಾಡಿ ಜಪ, ತಪ, ಮೂಗು ಮುಚ್ಚಿ ಮುಕ್ತಿ ಕೇಳುವವರು ನಾಚಿಕೆಗೆಟ್ಟವರು

ಮಾನವ ಜನ್ಮ ಬಹುದೊಡ್ಡದು ಇದನ್ನು ಹಾಳು ಮಾಡಿಕೊಳ್ಳದಿರಿ ಹುಚ್ಚಪ್ಪಗಳಿರಾ? ಎಂಬ ದಾಸವಾಣಿ ಅರಿತು ಬಾಳಬೇಕು. ಕೇವಲ ಬೆರಳೆಣಿಸಿ, ಮಾಲೆಯನ್ನು ಧರಿಸಿ ಮೌನಾಚರಿಸಿದರೆ ಖಂಡಿತಾ ಲಾಭವಿಲ್ಲ ಮುಕ್ತಿದಾರಿ ಸಿಗುವುದಿಲ್ಲ ಕಾಯಕದಲ್ಲಿಯೇ ನಾವು ಕೈಲಾಸವನ್ನು ಕಾಣಬೇಕಾಗಿದೆ ಸತತವಾಗಿ ಶ್ರಮಿಸುವವನು ಸದಾ ಸುಖಿಯಾಗಿರುತ್ತಾನೆ. ಮಣ್ಣಿನ ಕಾಯ ಮಣ್ಣಿಗೆ ಮೀಸಲಾದರೆ ಕಾಯದ ಕಾರ್ಯ ಶಿವನ ಕಣ್ಣಿಗೆ ಕಾಣುತ್ತದೆ. ಆದ್ದರಿಂದ ಆತ್ಮಸಾಕ್ಷಿಗನುಗುಣವಾಗಿ ಬದುಕಲು ವಿಚಾರ ಮಾಡ ಬೇಕಾಗಿದೆ.

ಮಣಿಯನೆಣಿಸಿ ಕಾಲವನ್ನು ಕಳೆಯಬಾರದು ಕಣಿಯ ಪೂಜಿಸಿ ಕಾಲ ಕಳೆಯುಬಾರದು ನೀರು ಕಂಡಲ್ಲಿ ಮುಳುಗಬಾರದು. ಮರವಕಂಡಲ್ಲಿ ಸುತ್ತಬಾರದು ಹುತ್ತವ ಬಡಿದರೆ ಹಾವು ಸಾಯಬಲ್ಲದೆ? ಅಘೋರ ತಪವ ಮಾಡಿದಡೇನು?

*ಸೋಮವಾರ ಮಂಗಳವಾರ ಮಾಡುವ ಭಕ್ತನ*
*ಲಿಂಗಭಕ್ತಗೆಂತು ಸರಿ ಎಂಬೆವಯ್ಯ*
*ದಿನ ಶ್ರೇಷ್ಠವೋ ಲಿಂಗ ಶ್ರೇಷ್ಠವೋ*
*ಆತ ದಿನವೇ ದೈವವೆಂದು ಮಾಡುವನಾಗಿ,*
*ಆತ ದಿನದ ಭಕ್ತನು, ಲಿಂಗವೇ ಘನವೆಂದು ದೈವವೆಂದು*
*ಮಾಡುವವನಾಗಿ ಆತ ಲಿಂಗ ಭಕ್ತನು*
*ದಿನವೊಂದೇ ಶಿವಶರಣೆಂಬುವಂಗೆ*
*ದಿನವೊಂದೇ ಹರಶರಣೆಂಬುವಂಗೆ*
*ದಿನವೊಂದೇ ಕೂಡಲಸಂಗನ ಮಾಣದೆ ನೆನೆಯುವಂಗೆ.*

ಕಾಲ ಬದಲಾಗುವುದಿಲ್ಲ ವಾರದ ಏಳು ದಿನಗಳಲ್ಲಿ ಅದೇ ಸೂರ್ಯ, ಅದೇ ಚಂದ್ರ ಬದಲಾಗುವುದು ಜನರ ನಡೆ, ನುಡಿ, ಆಚಾರ ವಿಚಾರಗಳು ಮಾತ್ರ, ಪ್ರಸ್ತುತ ದಿನಗಳಲ್ಲಿ ಸೋಮವಾರ ಶುಭದಿನವೆಂದು ಶುಭ ಕಾರ್ಯ ಗಳನ್ನು ಹಮ್ಮಿಕೊಳ್ಳುತ್ತಾರೆ. ಬುಧವಾರ ಅಶುಭದಿನ ಎಂದು ಪರಿಗಣಿಸುವ ಮತಿಭ್ರಮಿ ಮಾನವರೂ ಇದ್ದಾರೆ. ಕೆಲವು ವಾರದ ದಿನಗಳಲ್ಲಿ ಸ್ನಾನ ಮಾಡುವುದಿಲ್ಲ ಇವತ್ತ ನಡೆತದ ಸ್ನಾನ ಬೇಡ ಹೇಗಿದ್ದರೂ ಇವತ್ತು ರವಿವಾರ ಅಲ್ಲವೇ? ಎನ್ನುವವರು ಇದ್ದಾರೆ. ಇತ್ತಿತ್ತಲಾಗಿ ಈ ಪರಂಪರೆ ಮಾಯವಾಗುತ್ತಿದೆ. ನಗರ ಪ್ರದೇಶದಲ್ಲಿ ದಿನ, ಶ್ರೇಷ್ಠ-ಕನಿಷ್ಠ ಎನ್ನುವವರ ಸಂಖ್ಯೆ ಕಡಿಮೆಯಾಗಿದೆ. ಇದು ಸಂತೋಷದ ವಿಷಯ. ಮೈಮುರಿದು ದುಡಿಯುವವನಿಗೆ ಏಕೆ ದೈವಭಕ್ತನಿಗೆ ಸಕಲ ದಿನಗಳು ಸಮಾನ. ಆತ ಸದಾ ಕ್ರಿಯಾಶೀಲವಾಗಿರುವಂತೆ ಸರ್ವಕಾಲದಲ್ಲೂ, ನಾವು ಕ್ರಿಯಾ ಶೀಲರಾಗಿರುವುದು ಅತ್ಯಾವಶ್ಯಕವಾಗಿದೆ. ನನಗೆ ಖಂಡಿತಾ ಒಳ್ಳೆಯದೇ ಆಗುತ್ತದೆಂಬ ಅಚಲ ವಿಶ್ವಾಸದಿಂದ ಹೆಜ್ಜೆ ಇಡು ಎಲ್ಲವೂ ಯಶಸ್ವಿಯಾಗುತ್ತದೆ. ಅನುಮಾನದ ಭಾವವೇ ಅಪಾಯಕ್ಕೆಡೆ ಮಾಡಿ ಮಾನಸಿಕ ಗೊಂದಲಕ್ಕೆ ಕಾರಣವಾಗುತ್ತದೆ.

ಇನ್ನು ಕೆಲವರು ಕಾಶಿ, ಕೇದಾರ, ಶ್ರೀಶೈಲ, ರಾಮೇಶ್ವರ

ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿದರೆ ಪುಣ್ಯದ ಸಂಪಾದನೆಯಾಗುತ್ತದೆಂದು ಗಂಗೆಯಲ್ಲಿ ಮುಳುಗಿದರೆ ಪಾಪ ಪರಿಹಾರವಾಗುತ್ತದೆಂಬ ನಂಬಿಗೆಯನ್ನು ಶರಣರು ನಿರಾಕರಿಸುತ್ತಾರೆ. ಕೆಲವರಂತೂ ಹೊಟ್ಟೆ ತುಂಬಿಸಿಕೊಳ್ಳಲು ಕಷ್ಟ ಇರುವಾಗ ಸಾಲ ಮಾಡಿ ಪುಣ್ಯಕ್ಷೇತ್ರಕ್ಕೆ ಹೋಗುವವರು ಹಲವರಿದ್ದಾರೆ. ಕಾಣದ ದೇವರನ್ನು ಹುಡುಕಲು ತೀರ್ಥ ಯಾತ್ರೆ, ಪುಣ್ಯಕ್ಷೇತ್ರ ಮಾಡಿದರೇನು ಭ್ರಾಂತಿಗೆಟ್ಟು ತಿರುಗಿ ಬಂದರೇನು ? ನಿನ್ನ ಅಂತರಂಗದ ಗುಡಿಯನ್ನೊಕ್ಕು ನೋಡು ಶಾಂತಮಲ್ಲನಾದ ಆತ್ಮ ನಿನ್ನಲ್ಲಿದ್ದಾನೆ. ಮನಸ್ಸು-ಮನಸ್ಸುಗಳನ್ನು ಕಟ್ಟುವ ಕೆಲಸದಲ್ಲಿ ನಿರತರಾಗಿರಬೇಕೇ ವಿನಃ ಸ್ಥಾವರ, ಗುಡಿ ಗುಂಡಾರಗಳಿಗಲ್ಲ ! ಭಕ್ತಿಯ ಹೆಸರಿನಲ್ಲಿ ಹೀನ ಆಚರಣೆಯನ್ನು ಆಚರಿಸುವವರನ್ನು ತನ್ನ ಕಾಲದಲ್ಲಿ ಕಂಡ ಅಂಬಿಗರ ಚೌಡಯ್ಯ ಉಗ್ರವಾಗಿ ಖಂಡಿಸಿದ್ದಾನೆ.

*ಕಾಸಿಗೆ ಹೋದೆನೆಂಬುವರು ಹೇಸಿ ತೊತ್ತಿನ ಮಕ್ಕಳಯ್ಯ*
*ಮೈಲಾರಕ್ಕೆ ಹೋದೆನೆಂಬುವರು ಮಾದಗಿತ್ತಿಯ ಮಕ್ಕಳಯ್ಯ*
*ಪರ್ವತಕ್ಕೆ ಹೋದೆನೆಂಬುವರು ಹಾದರಗಿತ್ತಿಯ ಮಕ್ಕಳಯ್ಯ*
*ರಾಚೋಟಿಗೆ ಹೋದನೆಂಬುವರು ಲಜ್ಜೆಮಾಡಿ ತೊತ್ತಿನ ಮಕ್ಕಳಯ್ಯ*
*ಛೇ... ಛೇ... ಇದು ಭಕ್ತಿಯಲ್ಲವಯ್ಯ*
*ಅದೆಂತೆಂದೊಡೆ*
*ಪರಬ್ರಹ್ಮ ಮೂರುತಿಯಾದ ಪರಶಿವನೆ ಗುರುನಾಮದಿಂ*
*ಇಷ್ಟಲಿಂಗವ ಧರಿಸಿ ಪಂಚಾಕ್ಷರಿಯ ಬೋಧಿಸಿದ ಮೇಲೆ*
*ಆ ಭಕ್ತನ ಕಾಯವೇ ಕೈಲಾಸ*
*ಅವನ ಒಡಲೆ ಸೇತುಬಂಧ ರಾಮೇಶ್ವರ*
*ಅವನ ಶಿರವೆ ಶ್ರೀಶೈಲ*
*ಆತ ಮಾಡುವ ಆಚಾರವೆ ಪಂಚಪರುಷ*
*ಇದು ತಿಳಿಯದೆ ಶಾಸ್ತ್ರದಿಂದ ಕೇಳಿ ಅರಿಯದೆ*
*ಮಂದಬುದ್ಧಿಯಿಂದ ಪರ್ವತಕ್ಕೆ ಹೋಗಿ*
*ಪಾತಾಳಗಂಗೆಯಲ್ಲಿ ಮುಳುಮುಳುಗೆದ್ದರೆ,*
*ಛೇ... ಛೇ... ನಿನ್ನ ದೇಹದ ಮೇಲಣ ಮಣ್ಣು*
*ಹೋಯಿತ್ತಲ್ಲದೆ ನಿನ್ನ ಪಾಪವು ಹೋಗಲಿಲ್ಲವು*
*ಅಲ್ಲಿಂದ ಕಡೆಗೆ ಬಂದು*
*ಕೆಟ್ಟ ಕತ್ತಿಯ ಕೊಂಡು ಕೆರವಿನಟ್ಟೆಯ ಮೇಲೆ ಮಸೆದು*
*ಮಸ್ತಕವ ತೋಯಿಸಿ ತಲೆಯ ಬೋಳಿಸಿಕೊಂಡರೆ*
*ನಿನ್ನ ತಲೆಯ ತಿಂಡಿ ಹೋಯಿತಲ್ಲದೆ ನಿನ್ನ ಪಾಪವು*
*ಬಿಡಲಿಲ್ಲವಯ್ಯ, ಅಲ್ಲಿಂದ ಕೋಲುಬುಟ್ಟಿಯ*
*ತೆಗೆದುಕೊಂಡು ಬರುವಂತಹ*
*ದಿಂಡೆತೊತ್ತಿನ ಮಕ್ಕಳ ಕಣ್ಣಲ್ಲಿ ಕಂಡು*
*ಪಡಿಹಾರ ಉತ್ತಣ್ಣನ ಎಡದ ಪಾದ ಎಕ್ಕಡದಿಂದೆ*
*ಪಟಪಟನೆ ಹೊಡೆ ಎಂದಾತ*
*ನಮ್ಮ ಅಂಬಿಗರ ಚೌಡಯ್ಯ ನಿಜಶರಣನು*

ಇದೊಂದು ವಚನ ಓದಿ ಅರಗಿಸಿಕೊಂಡು ಜೀವನದಲ್ಲಿ ಅಳವಡಿಸಿಕೊಂಡು 'ದುಡಿಮೆಯೇ ದೇವರೆಂದು' ತಿಳಿದು ಮನಸಾಕ್ಷಿಯಾಗಿ ನಡೆದುಕೊಂಡು ಈ ಮರ್ತ್ಯಲೋಕಕ್ಕೆ ಸರ್ವರು ಸಲ್ಲಬೇಕಾಗಿದೆ.

*ಸತ್ಯವಂತರ ಸಂಗವಿರಲು ತೀರ್ಥವೇತಕೆ*
*ನಿತ್ಯಜ್ಞಾನಿಯಾದ ಮೇಲೆ ಚಿಂತೆ ಏತಕೆ ?*

ಎಂಬ ನಿಜಜ್ಞಾನವನ್ನು ಅರಿತು ಬಾಳಬೇಕಾಗಿದೆ. ಪುಣ್ಯ ಕ್ಷೇತ್ರದರ್ಶನ ಮಾಡಿ ಗಂಗೆಯಲ್ಲಿ ಮಿಂದು ನಂತರ ಪಾಪಕಾರ್ಯದಲ್ಲಿ ಅನಾಚಾರದಲ್ಲಿ ತೊಡಗಿದರೇನು ಫಲ? ಬಹಿರಂಗದ ಕೊಳೆ ಕಳೆದುಕೊಳ್ಳುವುದಕ್ಕಿಂತ ಶರಣರ ಅನುಭಾವದ ವಚಗಳಿಂದ ಅಂತರಂಗದ ಮನದ ಮೈಲಿಗೆಯನ್ನು ಕಳೆದುಕೊಂಡು ಪ್ರಾರಬ್ಧವನ್ನು ಚಿಂತಿಸದೇ ಪ್ರಯತ್ನಶೀಲರಾಗಿ ಮಹಾಮಾನವನಾಗಿ ಬೆಳಗಿನೊಣಗಣ ಬೆಳಕಿನಲ್ಲಿ ಬದುಕನ್ನು ಬೆಳಗಬೇಕಾಗಿದೆ, ಮಹಾಬೆಳಗನ್ನು ಮುಟ್ಟಬೇಕಾಗಿದೆ ಈ ನಿಟ್ಟಿನಲ್ಲಿ ಆಲೋಚಿಸುವುದು ಒಳ್ಳೆಯದಲ್ಲವೇ? ಬಲ್ಲವರು ವಿಚಾರ ಮಾಡಬೇಕಾಗಿದೆ.

❒

ಸೌಜನ್ಯ, ವಿನಯ, ನಮ್ರವಾಣಿ, ಮೃದು ವಚನದಿಂದ ಆನಂದವೇ ಉಂಟಾಗುತ್ತದೆ. ಮಾತು ಮನುಷ್ಯನ ಅಳತೆಯ ಸಾಧನ. ಸಜ್ಜನ-ದುರ್ಜನ ನಿರ್ಣಯವಾಗಬೇಕಾದರೆ ಮಾತಿನಿಂದಲೇ ಸಾಧ್ಯ. ಶತ್ರುತ್ವ-ಮಿತ್ರತ್ವ ಬರುವುದಕ್ಕೆ ಮಾತೇ ಕಾರಣ; ಮಾತು ಕಠೋರವಾದರೆ ಶತ್ರು, ಮಾತು ವಿನಯ ಸೌಜನ್ಯವಾದಾಗ ಮಿತ್ರ.

-ಶ್ರೀವಾಣಿ





## ಗುಣಾತ್ಮಕ ಶಿಕ್ಷಣ ನೀಡುವಲ್ಲಿ ಶಿಕ್ಷಕರ ಪಾತ್ರ

-ರಾಮೇಶ್ವರ ಡಾಣಿ*

ರಾಜ್ಯದ ಶೈಕ್ಷಣಿಕ ಕ್ಷೇತ್ರದಲ್ಲಿನ ಮಹತ್ವದ ಮೈಲಿಗಲ್ಲು ಎಂದರೆ 'ಗುಣಾತ್ಮಕ ಶಿಕ್ಷಣ'. ಇದರಲ್ಲಿ ಶಿಕ್ಷಕರ ಪಾತ್ರ ಬಹು ಅಮೂಲ್ಯ ಹಾಗೂ ಮಹತ್ವವಾದದ್ದು. ಶಿಕ್ಷಕರು ಗುಣಮಟ್ಟದ ಶಿಕ್ಷಣ ನೀಡಲು ತಮ್ಮನ್ನು ತಾವು ತೊಡಗಿಸಿಕೊಳ್ಳುವುದು ಮುಖ್ಯ ಕೆಲಸವಾಗಬೇಕು. ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ತರಗತಿಯ ದಿನಚರಿಗಳನ್ನು ಶಿಕ್ಷಕರು ಆದ್ಯತೆಯಲ್ಲಿ ಗುರುತಿಸಬೇಕು. ಅದಕ್ಕೆ ಅನುಸರಿಸಿ ಅವಧಿಗಳನ್ನು ನಿರ್ವಹಣೆ ಮಾಡುವುದು ಶಿಕ್ಷಕರ ಕಾರ್ಯವಾಗಬೇಕು. ಗುಣಮಟ್ಟದ ಶಿಕ್ಷಣವೆಂದರೆ 'ಭೌತಿಕ ವಾತಾವರಣ, ವೃತ್ತಿಪರತೆಯ ಪ್ರಾವೀಣ್ಯತೆ ಹೊಂದಿದ ಶಿಕ್ಷಕರು, ಮುಖ್ಯಶಿಕ್ಷಕರು, ಶಾಲಾ ವಾತಾವರಣ, ಶಾಲಾ ಅಭಿವೃದ್ಧಿ ಸಮಿತಿ, ನೈಜ ಅಸ್ತಿತ್ವಗಳನ್ನು ಹೊಂದಿರುವ ಶಿಕ್ಷಣವೇ ಗುಣಮಟ್ಟದ ಶಿಕ್ಷಣ'. ಇಂದಿನ 'ಸರ್ವ ಶಿಕ್ಷಣ ಅಭಿಯಾನ' (ಎಸ್.ಎಸ್.ಎ) ಕಾರ್ಯಕ್ರಮವು ಸಹ ದಾಖಲಾತಿ, ಹಾಜರಾತಿ, ಗುಣಮಟ್ಟದ ಶಿಕ್ಷಣ ಎಂಬ ಮೂರು ಮುಖ್ಯ ಅಂಶಗಳನ್ನೇ ಹೊಂದಿರುತ್ತದೆ.

'ಭಾಷೆ' ಹಾಗೂ 'ವಿಷಯ'ಗಳಲ್ಲಿನ ಕ್ಲಿಷ್ಟತೆಯನ್ನು ಗುರುತಿಸಿ, ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದು ಶಿಕ್ಷಕರ ಆದ್ಯಗುರಿಯಾಗಬೇಕು. ಪರಿಹಾರ ಬೋಧನೆ, ಶಾಲಾ ಶೈಕ್ಷಣಿಕ ಯೋಜನೆ, ವಿಶೇಷ ತರಬೇತಿಗಳು, ಅನುಪಾಲನಾ ಚಟುವಟಿಕೆಗಳ ಬಗ್ಗೆ ಶಿಕ್ಷಕರಲ್ಲಿ ಕುತೂಹಲವಿರಬೇಕು. ತರಬೇತಿಗೆ ಅನುಸರಿಸಿ ಕಲಿಕೆ ಪ್ರಕ್ರಿಯೆಯಲ್ಲಿ ತೊಡಗಬೇಕು. ನಮ್ಮ ಶೈಕ್ಷಣಿಕ ನೀತಿ ನಿರೂಪಕರು, ಶಿಕ್ಷಣ ತಜ್ಞರು, ಆಡಳಿತಗಾರರು, ದೇಶದ ಹಲವೆಡೆ ರೂಪಿಸಲ್ಪಟ್ಟ ಪ್ರಯೋಗಗಳ ಸಲಹೆಗಳನ್ನು ಅವಲೋಕಿಸುತ್ತ ಶಿಕ್ಷಕ ಅವರ ಮಾರ್ಗದರ್ಶನದಲ್ಲಿಯೇ ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಬೇಕು. ಮೌಖಿಕ, ಓದುವ, ಆಲಿಸುವ ಸಂಪನ್ಮೂಲ ಕ್ಷೇತ್ರಗಳಿಂದಲೂ ಹೆಚ್ಚಿನ ಮಾಹಿತಿಯನ್ನು ಪಡೆದುಕೊಂಡು ನಮ್ಮ ಸಂದೇಹಗಳಿಗೆ ಪರಿಹಾರ ಕಂಡುಕೊಳ್ಳುವ ಮನೋಭಾವನೆಯನ್ನು ಹೊಂದಿರಬೇಕು. ದೇಶದ ಪ್ರತಿಯೊಂದು ಮಗು ಜನಾಂಗ ಜಾತಿ ಭೇದವಿಲ್ಲದೇ, ಪ್ರಾದೇಶಿಕ ಅಸಮಾನತೆಯಿಲ್ಲದೆ, ತರಗತಿವಾರು ವಯೋಮಿತಿಗನುಗುಣವಾಗಿ ನಿಗದಿಗೊಳಿಸಿರುವ ಸಾಮರ್ಥ್ಯಗಳನ್ನು ಗಳಿಸುವಂತೆ ಮಾಡುವುದು ಶಿಕ್ಷಕರ ಸಂಪೂರ್ಣ ಜವಾಬ್ದಾರಿಯಾಗಿರಬೇಕು. ಮಕ್ಕಳ ಕಲಿಕೆಯ ಮೇಲೆ ಶಾಲಾ ಸನ್ನಿವೇಶ, ಪರಿಸರ, ನಮ್ಮ ಬೋಧನಾ ವಿಧಾನ, ಪೋಷಕರ ಆಸಕ್ತಿ, ಶಿಕ್ಷಕರ ವೃತ್ತಿ ಸಾಮರ್ಥ್ಯ, ಇತರ ಬಾಹ್ಯ ಹಾಗೂ ಆಂತರಿಕ ಅಂಶಗಳು ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ಅತ್ಯಗತ್ಯವಾಗಿದೆ ಎಂದರೂ ತಪ್ಪಲ್ಲ.

**ಗುಣಮಟ್ಟದ ಶಿಕ್ಷಣ ನೀಡಲು ಶಿಕ್ಷಕರು ಗಮನದಲ್ಲಿಡಬೇಕಾದ ಅಂಶಗಳು :**

ಮಕ್ಕಳು ನಿಯಮಿತವಾಗಿ ಶಾಲೆಗೆ ಹಾಜರಾಗುವಂತೆ ಪ್ರೇರೇಪಿಸುವುದು ಶಿಕ್ಷಕರ ಕೆಲಸವಾಗಬೇಕು. ಸಿ.ಆರ್.ಸಿ. ಮತ್ತು ಬಿ.ಆರ್.ಸಿ. ಅಧಿಕಾರಿಗಳು ಹಾಗೂ ಸಂಪನ್ಮೂಲ ವ್ಯಕ್ತಿಗಳಿಂದ ಸಾಂದರ್ಭಿಕ ತರಬೇತಿ ಹಾಗೂ ಮಾರ್ಗದರ್ಶನಗಳನ್ನು ತಪ್ಪದೇ ಪಡೆದು ಅವುಗಳನ್ನು ಪಾಲಿಸುವುದು. ಶಾಲೆಯ ಎಲ್ಲಾ ಶಿಕ್ಷಕರೊಂದಿಗೆ ಸಮಾಲೋಚನೆ ನಡೆಸುವುದು ಪ್ರತಿಯೊಬ್ಬ ಶಿಕ್ಷಕರ ಕರ್ತವ್ಯ. ಮಕ್ಕಳಲ್ಲಿ ಭಯದ ವಾತಾವರಣ, ಬೌದ್ಧಿಕ ಹೊರೆಯನ್ನು ಹೇರದೆ ಅವರಲ್ಲಿ ಆತ್ಮವಿಶ್ವಾಸ ಬೆಳೆಸಬೇಕು. ಎಸ್.ಡಿ.ಎಂ.ಸಿ. ಅಧ್ಯಕ್ಷರು ಮತ್ತು ಸದಸ್ಯರಿಗೆ, ಪೋಷಕರಿಗೆ, ಸಮುದಾಯಕ್ಕೆ ಶಾಲೆಯ ಬಗ್ಗೆ ಅಭಿಮಾನ ಮೂಡಿಸಿ ಅವರಿಂದ ಸಕಲ ರೀತಿಯ ಸಹಾಯ ಸಹಕಾರಗಳನ್ನು ಪಡೆಯುವುದು. ಶಾಲೆಗೆ ಮಕ್ಕಳು ಗೈರು ಹಾಜರಾಗದಂತೆ ನೋಡಿಕೊಳ್ಳುವುದು ಶಿಕ್ಷಕರ ಜವಾಬ್ದಾರಿಯಾಗಿರಬೇಕು. ವಿದ್ಯಾರ್ಥಿಗಳ ಶ್ರೇಯಸ್ಸು, ಶಾಲೆಯ ಪ್ರಗತಿಗೆ, ಸಾಧನೆಗೆ ನಮ್ಮ ಪಾತ್ರ ಹಿರಿಯದಾಗಿದ್ದು

* ಸಹಶಿಕ್ಷಕರು, ಸರಕಾರಿ ಪ್ರೌಢಶಾಲೆ, ಕೊರಡಕೇರಾ-೫೮೩೧೨೧. ಕುಷ್ಟಗಿ ತಾ॥, ಕೊಪ್ಪಳ ಜಿಲ್ಲೆ.

ಇದರ ಬೆಳವಣಿಗೆಗಾಗಿ ಪ್ರತಿಯೊಬ್ಬರೂ ಗಮನವಿಟ್ಟು ಶೈಕ್ಷಣಿಕ ಪ್ರಗತಿಗೆ ದುಡಿಯಬೇಕು. ಪಾಠದ ಅಗತ್ಯಕ್ಕೆ ಅನುಸರಿಸಿ ಉತ್ತಮ ಪಾಠೋಪಕರಣಗಳನ್ನು, ಮಾದರಿಗಳನ್ನು, ನಕಾಶೆಗಳನ್ನು ಚಾರ್ಟುಗಳನ್ನು ಬಳಸುವುದು. ಪ್ರಾಣಿಗಳು, ಅಗತ್ಯವಸ್ತುಗಳು, ಹೂಗಳು, ಹಣ್ಣು, ತರಕಾರಿ, ದಿನಬಳಕೆಯ ವಸ್ತುಗಳು, ಸಸ್ಯಗಳು, ಮರಗಳ ಮಾದರಿಯನ್ನು ಮಕ್ಕಳಿಗೆ ತೋರಿಸಿ ಫಲಪ್ರದವಾದ ಬೋಧನೆಯಲ್ಲಿ ತೊಡಗುವುದು. ನೈತಿಕ ಮೌಲ್ಯಗಳು, ನೀತಿಪಾಠಗಳನ್ನು, ಅಗತ್ಯವಾದರೆ ಸಂಗೀತ, ನಾಟಕ, ಹಾಡುಗಾರಿಕೆ, ಅಭಿನಯಕಲೆ, ಕರಕೌಶಲ್ಯಗಳನ್ನು ಮಕ್ಕಳಲ್ಲಿ ರೂಢಿಸಿಕೊಳ್ಳಲು ಪ್ರೇರಣೆ ನೀಡಿ ಅವರಲ್ಲಿ ಅಭಿವ್ಯಕ್ತಿ ಸಾಮರ್ಥ್ಯಗಳನ್ನು ಬೆಳೆಸುವುದು ಮಹತ್ವದ ಕೆಲಸವಾಗಬೇಕು.

**ಶಿಕ್ಷಕರ ಪಾತ್ರ :**

'ಮಕ್ಕಳು ಕಲಿಕೆಯಲ್ಲಿ ಹಿಂದುಳಿಯಲು ಶಿಕ್ಷಕನೇ ಕಾರಣ' ಎಂಬ ಮಾತಿದೆ. ಕೇವಲ ಶಿಕ್ಷಕನಷ್ಟೇ ಇದಕ್ಕೆ ಹೊಣೆಗಾರನಲ್ಲ. ಇದು ಏಕವ್ಯಕ್ತಿ ಪ್ರಕ್ರಿಯೆಯಲ್ಲ. ಪೋಷಕರು, ಸಮಾಜ, ಶಾಲೆ, ಸರಕಾರ, ಶಿಕ್ಷಣ ಇಲಾಖೆ ಮತ್ತು ಮಕ್ಕಳು ಎಲ್ಲರೂ ಹೊಣೆಗಾರರೇ. ಶಿಕ್ಷಣದ ಯಶಸ್ಸು ಅಂತಿಮವಾಗಿ ಶಿಕ್ಷಕರನ್ನೇ ಅವಲಂಬಿಸಿದೆ. ಶಿಕ್ಷಕರು ತಮ್ಮ ಸ್ವಂತಿಕೆ ಮತ್ತು ಘನತೆ ಕಾಪಾಡಿಕೊಳ್ಳಲು ಜ್ಞಾನದ ಹಸಿವನ್ನು ಹೆಚ್ಚಿಸಿಕೊಳ್ಳಬೇಕು. ಶಿಕ್ಷಕನಿಗೆ ಪಾಠದ ಹೊಣೆಗಿಂತ ಇತರ ಹೊರೆಗಳೇ ಜಾಸ್ತಿಯಾಗಿವೆ. ಜನಗಣತಿ, ಚುನಾವಣೆ ಕೆಲಸಗಳು, ಮಧ್ಯಾಹ್ನದ ಬಿಸಿಯೂಟ, ಇಲಾಖೆಯ ಕಾರ್ಯಗಳು, ದಿನಕ್ಕೊಂದು ಮಾಹಿತಿಗಾಗಿ ಅಲೆದಾಟ, ಎಸ್.ಡಿ.ಎಂ.ಸಿ. ಯವರ ಅನಗತ್ಯ ಕಿರುಕುಳ, ಗ್ರಾಮದ ಹಿರಿಕಿರಿಯ ರಾಜಕಾರಣಿಗಳ ಜೊತೆ ಸರ್ಕಸ್, ಇತ್ಯಾದಿ ಸಮಸ್ಯೆಗಳು ಇದ್ದರೂ ಅದನ್ನು ಗೆದ್ದು ಬರುವುದು ಶಿಕ್ಷಕರ ಕೆಲಸವೇ ಆಗಿದೆ. 'ಶಿಕ್ಷಕ ಸಹನಾಶೀಲನಾದ ಗುರು' ಎನ್ನುವರು. ವೃತ್ತಿಗಿರಬೇಕಾದ ಸಹನೆಯನ್ನೇ ನಾವು ಕಳೆದುಕೊಳ್ಳಬಾರದು. ಮಕ್ಕಳ ಮನಸ್ಸನ್ನು ಅರಿಯುವಲ್ಲಿ ವಿಫಲರಾಗಬಾರದು. ಮಕ್ಕಳ ಕಲಿಕೆಗೆ ನಾವು ಪ್ರೋತ್ಸಾಹಿಸಿ ಅವರಲ್ಲಿ, ಪ್ರೀತಿ, ವಿಶ್ವಾಸ, ತುಂಬಿ ಆಕರ್ಷಣೆಯ ಮತ್ತು ಹೆಚ್ಚಿನ ಬೋಧನೋಪಕರಣಗಳನ್ನು ಬಳಸಿ, ಮನರಂಜನೆ, ಆಟ, ಚಟುವಟಿಕೆಗಳಿಂದ ಕಲಿಸಬೇಕಾದದ್ದು ನಮ್ಮ ಗುರಿಯಾಗಬೇಕು.

**ಇಂದಿನ ವಿದ್ಯಾರ್ಥಿಗಳು :**

ವಿಶ್ವದ ವಿಕೃತವಾದ ಆಕರ್ಷಣೆಗಳು ದೂರದರ್ಶನ (ಟಿ.ವಿ) ಸಿನಿಮಾ, ಕ್ರಿಕೆಟ್ ಆಟದ ದಾಸರಾಗಿ ಮಕ್ಕಳು ಬದಲಾಗುವುದನ್ನು ನಾವಿಂದು ತಪ್ಪಿಸಬೇಕು. ಮಕ್ಕಳು ಶಿಕ್ಷಣದ ಬಗ್ಗೆ ನಿರಾಸಕ್ತರಾಗಿ, ಕಲಿಕೆಯಲ್ಲಿ ಹಿಂದೆ ಬೀಳುತ್ತಿರುವರು. ಮಗುವಿನಲ್ಲಿ ಸಮಯಪಾಲನೆ ಮಾಡುವ ಕಲೆಯನ್ನು ಕಲಿಯುವುದೇ ಇಲ್ಲ. ವಯೋಮಾನಕ್ಕೆ ತಕ್ಕ ಓದು ಅಗತ್ಯ. ಮಕ್ಕಳು ಶಿಕ್ಷಕರು ಹೇಳಿದ ಜವಾಬ್ದಾರಿ ಮತ್ತು ಗೃಹಪಾಠ ನಿರ್ವಹಣೆಯನ್ನು ಸರಿಯಾಗಿ ಮಾಡುತ್ತಿಲ್ಲ. ಶಾಲಾ ಚಟುವಟಿಕೆಗಳಲ್ಲಿ ಎಲ್ಲಾ ಮಕ್ಕಳು ಸಕ್ರಿಯವಾಗಿ ಪಾಲ್ಗೊಳ್ಳುತ್ತಿಲ್ಲ ಇದಕ್ಕೆ ಕಾರಣ ಆರ್ಥಿಕ ತೊಂದರೆ, ಮನೆಯ ಸಮಸ್ಯೆಗಳು, ವೈಯಕ್ತಿಕ ನಿರಾಸಕ್ತಿಯೂ ಕಾರಣವಾಗುತ್ತದೆ. ಶಿಕ್ಷಣದಲ್ಲಿಂದು ಪಾಲಕರ ವರ್ಗಕ್ಕೆ ವಿಶ್ವಾಸವಿಲ್ಲ. ವಿದ್ಯಾರ್ಥಿ ವರ್ಗಕ್ಕೆ ಭರವಸೆ ಇಲ್ಲ. ಶಿಕ್ಷಕ ವರ್ಗಕ್ಕೆ ಸ್ಪಷ್ಟತೆ ಮತ್ತು ಸಮಗ್ರತೆ ಇಲ್ಲದಂತಾಗಿದೆ. ಶಿಕ್ಷಣ ಮಟ್ಟ ಕುಸಿಯುತ್ತಿರು ವುದಕ್ಕೆ ಶಿಕ್ಷಕನೊಬ್ಬನನ್ನೇ ಹೊಣೆಗಾರನನ್ನಾಗಿ ಮಾಡುವುದು ಸರಿಯಲ್ಲ. ಇದರಲ್ಲಿ ಮುಖ್ಯವಾಗಿ ಮಕ್ಕಳು ಸಹ ಸಂಪೂರ್ಣ ಹೊಣೆಗಾರರಾಗುತ್ತಾರೆಂದು ಹೇಳಬಹುದು.

**ಪೋಷಕರ ಪಾತ್ರ :**

ಶೈಕ್ಷಣಿಕ ಪ್ರಕ್ರಿಯೆಗಳಲ್ಲಿ ಅತ್ಯಂತ ಮಹತ್ವದ ಪಾತ್ರ ಪೋಷಕರದ್ದು. ಟಿ.ಪಿ. ಕೈಲಾಸಂರವರು 'ಮಕ್ಕಳ ಸ್ಕೂಲ್ ಮನೇಲಲ್ವೆ' ಎಂದು ಹೇಳಿರುವುದು ಸತ್ಯವಿದೆ. ಗ್ರಾಮೀಣ ಪಾಲಕರ ಶೈಕ್ಷಣಿಕ ಪ್ರಜ್ಞೆ ಇಂದಿಗೂ ಜಾಗ್ರತವಾಗಿಲ್ಲ. ಗ್ರಾಮೀಣ ಜನತೆಗೆ ಶಿಕ್ಷಣದ ಅನಿವಾರ್ಯತೆ ಮತ್ತು ಅದರ ಉಪಯುಕ್ತತೆಯ ಬಗ್ಗೆ ಸರಿಯಾದ ಕಲ್ಪನೆ ಮೂಡಿಲ್ಲ. ಕೃಷಿ ಗ್ರಾಮೀಣರ ಮೂಲ ಕಸುಬು, ಅನಕ್ಷರತೆ, ಮನೆಯಲ್ಲಿ ಶೈಕ್ಷಣಿಕ ಪರಿಸರ ಶೂನ್ಯ, ಬದುಕು ಅತೃಪ್ತಿಕರ, ಬಡತನವೇ





ಬಂಡವಾಳ ಎನ್ನುವ ಸ್ಥಿತಿ ಇರುವುದರಿಂದ ಮಕ್ಕಳು ಶಿಕ್ಷಣಕ್ಕೆ ಪರಕೀಯರಾಗುವರು.

ಮಕ್ಕಳ ದಿನನಿತ್ಯದ ಓದು ಬರಹ, ಪಾಠ, ಪಠ್ಯಗಳಲ್ಲಿ ಹಳ್ಳಿಯ ಕುಟುಂಬದ ಮಕ್ಕಳಿಗೆ ತಂದೆ ತಾಯಿಗಳಿಂದ ಮಾರ್ಗದರ್ಶನದ ನೆರವು ಮತ್ತು ಪ್ರೋತ್ಸಾಹವೇ ಇಲ್ಲ ಎನ್ನಬಹುದು. ಗ್ರಾಮೀಣರಲ್ಲಿ ಮಕ್ಕಳನ್ನು ಶಾಲೆಗೆ ಕಳಿಸಲಿಕ್ಕೆ ಆಸಕ್ತಿಯ ಕೊರತೆ, ಊಟ, ಉಡುಪು, ಪುಸ್ತಕ ಮತ್ತು ಕಲಿಕಾ ಸಾಮಾಗ್ರಿಗಳ ಕಾಳಜಿ ಇಲ್ಲ. ಹೆಣ್ಣು ಮಕ್ಕಳಾದರೆ ಋತುಮತಿಯಾಗುವ ಸಮಸ್ಯೆ ಕೂಡಲೆ ಅಭ್ಯಾಸ ನಿಲ್ಲುವುದು.

ಗ್ರಾಮೀಣರಲ್ಲಿ ಎಷ್ಟು ಜನ ಪೋಷಕರು ಪ್ರೀತಿ ಮತ್ತು ಮಮತೆಯಿಂದ ಉತ್ತಮ ಪರಿಸರ ನಿರ್ಮಿಸಿ, ಮಕ್ಕಳ ಕಲಿಕೆ ಹಾಗೂ ಗೃಹಪಾಠಗಳನ್ನು ದಿನನಿತ್ಯ ಗಮನಿಸುತ್ತಾರೆ? ಶಾಲೆಯ ಸರ್ವತೋಮುಖ ಬೆಳವಣಿಗೆ ಬಗ್ಗೆ ಯೋಚಿಸುವರು? ಮಗುವಿನ ಕಲಿಕಾ ನ್ಯೂನತೆಗಳ ಬಗ್ಗೆ ಶಿಕ್ಷಕರೊಂದಿಗೆ ಮುಕ್ತವಾಗಿ ಚರ್ಚಿಸುತ್ತಾರೆ? ತಮ್ಮ ಮಕ್ಕಳಿಗೆ ಕೆಲಸದ ಹೊರೆ ಕಡಿಮೆ ಮಾಡಲು ಸಿದ್ಧರಿದ್ದಾರೆ? ಈ ಎಲ್ಲಾ ಪ್ರಶ್ನೆಗಳನ್ನು ಮನಗಂಡ ಸರಕಾರ ಪರಿಹಾರಕ್ಕಾಗಿ 'ಸಮುದಾಯ ದತ್ತ ಶಾಲೆ' ಎಂಬ ಕಾರ್ಯಕ್ರಮ ಜಾರಿಗೆ ತಂದಿತು. ಆದರೆ ಈ ಕಾರ್ಯಕ್ರಮಕ್ಕೆ ಪೋಷಕರು, ಪಾಲಕರು, ಎಸ್.ಡಿ.ಎಂ.ಸಿ. ಸದಸ್ಯರು ಮತ್ತು ಅಧ್ಯಕ್ಷರು ಸಭೆಗೆ ಬಂದಿರುವರೇ? ಸರಿಯಾಗಿ ಸಭೆಗಳನ್ನು ನಡೆಸಿರುವರೇ? ಸಭೆಯಲ್ಲಿ ಚರ್ಚಿಸಿದ ಸಮಸ್ಯೆಗಳ ಬಗ್ಗೆ ಪರಿಹಾರ ಸಿಕ್ಕಿದೆಯೇ? ಎಂಬ ಪ್ರಶ್ನೆಗಳು ಏಳುವುದು ಸಹಜ ವಾಗಿದೆ. ಹೀಗಾಗಿ ಪೋಷಕರೇ ಮಕ್ಕಳ ಕಲಿಕಾ ಪ್ರಗತಿಯಲ್ಲಿ ಹಿಂದೆ ಬಿದ್ದರೆ ಹೇಗೆ? ಎನ್ನುವುದನ್ನು ನಾವು ಗಂಭೀರ ವಾಗಿ ಆಲೋಚಿಸಬೇಕಾಗಿದೆ.

**ಶಿಕ್ಷಕರು ಹೇಗಿರಬೇಕು ?**

ಶಿಕ್ಷಕರ ಬೌದ್ಧಿಕ ಹಾಗೂ ಮಾನಸಿಕ ಮಟ್ಟ ಉತ್ತಮ ಸ್ಥಿತಿಯಲ್ಲಿದ್ದರೆ ಗುಣಾತ್ಮಕ ಶಿಕ್ಷಣ ನೀಡಲು ಸಾಧ್ಯ. ಮಗು ಕಲಿಯುವುದು ಪ್ರಾಥಮಿಕ ಸಂಗತಿಗಳನ್ನು, ಅದಕ್ಕೆ ಶಿಕ್ಷಕ ಉನ್ನತಮಟ್ಟದ ಜ್ಞಾನ, ಮಾಹಿತಿ ಜ್ಞಾನ ಹೊಂದಿರುವ ವ್ಯಕ್ತಿಗಳು ಪ್ರಾಥಮಿಕ ಮಟ್ಟದಲ್ಲಿ ಕಲಿಸುವ ಕೌಶಲ್ಯಗಳನ್ನು ಗಳಿಸಿಕೊಂಡು ಆ ಶಿಕ್ಷಕ ವೃತ್ತಿಗೆ ತೊಡಗಿದರೆ ಮಾತ್ರ ನಿಜವಾದ ಪ್ರಾಥಮಿಕ ಶಿಕ್ಷಣಕ್ಕೆ ಬಲವರ್ಧನೆಗೆ ಬರಲು ಸಾಧ್ಯ. ಶಿಕ್ಷಕ ಬೌದ್ಧಿಕವಾಗಿ ಸಬಲನಾಗದೆ, ನಿಜವಾದ ಬದಲಾವಣೆ ಸಾಧ್ಯವೇ ಇಲ್ಲ. ಕಲಿಸುವ ಶಿಕ್ಷಕನಿಗೆ ಬೌದ್ಧಿಕ, ಶೈಕ್ಷಣಿಕ ಅರ್ಹತೆಗಳ ಜೊತೆಗೆ ಕಲಿಕೆಯ ಪ್ರಕ್ರಿಯೆಯಲ್ಲಿ ಅಗತ್ಯವಾದ ಪ್ರಾವೀಣ್ಯತೆ ಹೊಂದುವುದು ಅಗತ್ಯ.

ಮಕ್ಕಳ ಸಮಗ್ರ ವ್ಯಕ್ತಿತ್ವ ವಿಕಸನದ ದೃಷ್ಟಿಯಿಂದ ಸಾಂಸ್ಕೃತಿಕ ಅಂಶಗಳಿಗೂ ಶಿಕ್ಷಣದಲ್ಲಿ ಗಮನಹರಿಸಬೇಕಾದದ್ದು ಶಿಕ್ಷಕರ ಕರ್ತವ್ಯ. ಸಾಂಸ್ಕೃತಿಕ ಅಂಶಗಳು ಗ್ರಾಮೀಣ ಪರಿಸರದ ಶಾಲೆಗಳಲ್ಲಿ ಬಹು ಸುಲಭವಾಗಿ ಯೋಜಿಸಬಹುದು. ಉದಾಹರಣೆಗೆ : ಕುಂಬಾರ, ಕಂಬಾರ, ಬಡಿಗ ಇತ್ಯಾದಿ ವೃತ್ತಿಗಳನ್ನು ಮಾಡುವವರನ್ನು ಸಂದರ್ಶಿಸಿ ಅವುಗಳ ಬಗ್ಗೆ ಮಕ್ಕಳಿಗೆ ಮಾಹಿತಿಯನ್ನು ನೀಡುವುದು. ಸ್ಥಳೀಯ ವೃತ್ತಿಗಾಯಕರು, ಜಾನಪದ ಹಾಡುಗಾರರು, ಕಲಾವಿದರನ್ನು ಬಳಸಿಕೊಂಡು ಮಕ್ಕಳಿಗೆ ಜಾನಪದೀಯ ಅಂಶಗಳು ಹರಿದು ಬರುವಂತೆ ದಿನವನ್ನು ರೂಪಿಸಬಹುದು. ಇದರಿಂದ ಸ್ಥಳೀಯತೆಗೆ ಅಧಿಕೃತ ಮುದ್ರೆ ಬಿದ್ದು ಶಿಕ್ಷಣ ಕೇವಲ ಬೌದ್ಧಿಕ ಚಟುವಟಿಕೆಯಲ್ಲಿ ಜೀವನದೊಂದಿಗೆ ಪರಿಸರದೊಂದಿಗೆ ಇರುವ ಅವಿನಾಭಾವ ಸಂಬಂಧದ ಸ್ವರೂಪ ಎಂಬುದನ್ನು ಅರಿಯುವ ಪ್ರಬಲ ಸಾಧನವಾಗುತ್ತದೆ.

ಮಕ್ಕಳು ಪ್ರಾಥಮಿಕ ಶಿಕ್ಷಣ ಪೂರೈಸುವ ಹೊತ್ತಿಗೆ ತಮ್ಮ ಜಿಲ್ಲೆಯಲ್ಲಿರುವ ಐತಿಹಾಸಿಕ, ಸಾಂಸ್ಕೃತಿಕ, ಔದ್ಯೋಗಿಕ ಸ್ಥಳಗಳನ್ನು ನೋಡುವ ಕಾರ್ಯಕ್ರಮವನ್ನು ಶಿಕ್ಷಕ ರೂಪಿಸಬೇಕು. ಶಿಕ್ಷಕ ಮಕ್ಕಳಲ್ಲಿ ಪರಿಸರಜ್ಞಾನ, ಪಾರಂಪರಿಕ ಜ್ಞಾನಸಂಪತ್ತನ್ನು ತಿಳಿಸಿ, ಶೈಕ್ಷಣಿಕ ಪರಿಸರ ನಿರ್ಮಿಸಬೇಕು. ಶಾಲೆಯ ಗ್ರಂಥಾಲಯದ ಬಳಕೆಯನ್ನು ನಿರಂತರವಾಗಿರಿಸಿಕೊಂಡು ಮಕ್ಕಳಲ್ಲಿ ಪುಸ್ತಕ ಓದುವ ಕಲೆ ರೂಢಿಸಬೇಕು. ಉತ್ತಮವಾದ ಪ್ರಯೋಗ ಶಾಲೆಯ ಬಳಕೆ ಮಾಡಿ ಮಕ್ಕಳಲ್ಲಿ ಸಂಶೋಧನೆ ಪ್ರಜ್ಞೆ ಬೆಳೆಸಬೇಕು. ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಪತ್ರಿಕೆಗಳು, ಸಾಹಿತ್ಯಕೃತಿಗಳು, ಮಕ್ಕಳ ಪತ್ರಿಕೆಗಳು, ಉತ್ತಮ ಟೇಪ್‌ರೆಕಾರ್ಡರ್ ಹಾಗೂ

ರೇಡಿಯೋ, ದೂರದರ್ಶನ (ಟಿ.ವಿ) ಸೆಟ್‌ಗಳ ಬಳಕೆಯ ಅಗತ್ಯವಿದೆ. ಕಲೆ, ಚಿತ್ರಕಲೆ, ಬರಹಗಳಿಗೆ ಸಂಬಂಧಿಸಿದ ಪ್ರದರ್ಶನಗಳನ್ನು ಏರ್ಪಡಿಸಿ ಅವುಗಳ ಬಗ್ಗೆ ವಿದ್ಯಾರ್ಥಿ ಸಂಬಂಧ ಸಹಜ ಹಾಗೂ ಮಾನವೀಯವಾಗಿರಬೇಕು. ಕಲಿಕಾವಿಧಾನ, ನವನವೀನ ದೃಷ್ಟಿಕೋನ, ಹೊಸ ಪದ್ಧತಿಗಳನ್ನು ಅಳವಡಿಸಿಕೊಂಡು ಶಿಕ್ಷಕ ಬೋಧಿಸುವ ಕಲೆ ರೂಢಿಸಬೇಕು.

**ಗ್ರಾಮೀಣ ಶಿಕ್ಷಣದ ಚಿಂತನೆ :**

ಇಂದು ಶಿಕ್ಷಣ ಕ್ಷೇತ್ರವು ಬಹಳಷ್ಟು ಮಹತ್ವ ಮತ್ತು ವ್ಯಾಪಕತೆಯನ್ನು ಪಡೆದುಕೊಳ್ಳುತ್ತಿದೆ. ಸರ್ಕಾರಗಳು ಹೊಸ ಹೊಸ ಯೋಜನೆಗಳನ್ನು ಮತ್ತು ಸಾಕಷ್ಟು ಹಣವನ್ನು ಶಿಕ್ಷಣರಂಗದ ಪ್ರಗತಿಗಾಗಿ ಬಳಸುತ್ತಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಅಮೂಲಾಗ್ರ ಬದಲಾವಣೆಗಳನ್ನು ಮಾಡಲು, ಶಿಕ್ಷಣ ಕ್ಷೇತ್ರಕ್ಕೆ ಹೊಸ ಚೈತನ್ಯವನ್ನು ತುಂಬಲು ಚಿಂತನೆಗಳನ್ನು ನಡೆಸುತ್ತಾ ಬಂದಿದೆ. ನಿರೀಕ್ಷಿತ ಯಶಸಿಗದಿದ್ದರೂ ಪ್ರಯೋಗಶೀಲತೆ ಇನ್ನೂ ನಿಂತಿಲ್ಲ. ನಗರ ಪ್ರದೇಶಕ್ಕಿಂತ ಗ್ರಾಮಾಂತರ ಪ್ರದೇಶದ ಮಕ್ಕಳು ಕನಿಷ್ಠ ಓದು, ಬರಹ, ಲೆಕ್ಕಗಳ ಸಾಮರ್ಥ್ಯಗಳನ್ನು ಗಳಿಸುವಲ್ಲಿ ಸಾಕಷ್ಟು ಹಿಂದುಳಿದಿದ್ದಾರೆ.

ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಮಕ್ಕಳು ಹಿಂದುಳಿದರೆ ದೇಶದ ಭವಿಷ್ಯವೇನು? ಹಾಗಾಗಿ ಮಕ್ಕಳು ಕಲಿಕೆಯಲ್ಲಿ ಯಾಕೆ ಹಿಂದುಳಿಯುತ್ತಿದ್ದಾರೆ ಎಂಬ ಪ್ರಶ್ನೆಗೆ ಉತ್ತರ ಕಾಣುವುದು ಅವಶ್ಯಕ. ಗ್ರಾಮೀಣ ಪ್ರದೇಶದ ಶಾಲಾ ಮಕ್ಕಳ ಕಲಿಕಾ ಸಾಮರ್ಥ್ಯ ಕುರಿತು 'ಪ್ರಥಮ್ ಸಂಪನ್ಮೂಲ ಕೇಂದ್ರ' ಇತ್ತೀಚೆಗೆ 2005ರಲ್ಲಿ ದೇಶದ 17 ರಾಜ್ಯಗಳ 19 ಜಿಲ್ಲೆಗಳಲ್ಲಿ ಅಧ್ಯಯನ ನಡೆಸಿ ತನ್ನ ವರದಿಯನ್ನು ಪ್ರಕಟಿಸಿದೆ. ಈ ಮಾಹಿತಿಯನ್ನು ಗಮನಿಸಿದರೆ ಗ್ರಾಮೀಣ ಮಕ್ಕಳ ಕಲಿಕೆಯ ಮಟ್ಟ ನಮಗೆ ಗಾಬರಿ ಹುಟ್ಟಿಸುವಂತಿದೆ. ಅಷ್ಟೇ ಅಲ್ಲ ನಮ್ಮ ವಿದ್ಯಾಭ್ಯಾಸದ ಮಟ್ಟ ಎಷ್ಟೊಂದು ಕಳಪೆಯಾಗಿರುವುದೆಂದು ಕಾಣುತ್ತದೆ.

ಮೇಲೆ ತಿಳಿಸಿದ ವರದಿಯನ್ವಯ ಪ್ರಾಥಮಿಕ ಶಾಲೆಗೆ ಹೋಗುವವರ ಸಂಖ್ಯೆ ಹೆಚ್ಚಿದೆ. ಅಂದರೆ 6ರಿಂದ 14 ವರ್ಷದೊಳಗಿನ ಮಕ್ಕಳು ಶೇ. 98. ಇದು ಖಂಡಿತಾ ಒಳ್ಳೆಯ ಬೆಳವಣಿಗೆ. ಆದರೆ ಶೇ. 45ರಷ್ಟು ಮಕ್ಕಳು ಗಣಿತದ ಅತಿ ಚಿಕ್ಕ ಸಮಸ್ಯೆಗಳಾದ ಕೂಡುವ, ಕಳೆಯುವ, ಭಾಗಿಸುವ ಪದ್ಧತಿಗಳನ್ನು ಬಿಡಿಸಲು ಸಮರ್ಥರಿಲ್ಲ. ಶೇ. 53 ರಷ್ಟು ಮಕ್ಕಳು 7ರಿಂದ 10 ವರ್ಷದ ಮಕ್ಕಳಿಗೆ ಸಣ್ಣ ಸಣ್ಣ ವಾಕ್ಯಗಳನ್ನು ಓದಲೂ ಬರುವುದಿಲ್ಲ. ಶೇ. 72ರಷ್ಟು ಮಕ್ಕಳು 2ನೆಯ ತರಗತಿಯ ಪಠ್ಯ ಓದಲು ಬರುವುದಿಲ್ಲ. ಇದು ಗ್ರಾಮಾಂತರ ಪ್ರದೇಶದ ಶಿಕ್ಷಣಕ್ಕೆ ಹಿಡಿದ ಕನ್ನಡಿಯಾಗಿದೆ. ಇಂಥಹ ಎಷ್ಟೋ ವರದಿಗಳು ಇಂದು ನಮಗೆ ಗಾಬರಿ ಹುಟ್ಟಿಸುತ್ತಾ ನಮ್ಮ ಶೈಕ್ಷಣಿಕ ವ್ಯವಸ್ಥೆಯನ್ನು ಅಣಕಿಸುವಂತೆ ಕಾಣುತ್ತಿವೆ. ಇಂಥಹ ಸಮಸ್ಯೆಗಳನ್ನು ನಿವಾರಣೆ ಮಾಡಲು ನಮ್ಮ ಶಿಕ್ಷಕರು ಎಚ್ಚೆತ್ತುಕೊಂಡು ಗುಣಾತ್ಮಕ ಶಿಕ್ಷಣವನ್ನು ನೀಡುವುದಕ್ಕೆ ಸಮರೋಪಾದಿಯಲ್ಲಿ ಸಿದ್ಧವಾಗಬೇಕಾಗಿದೆ.

**ಪ್ರಾಥಮಿಕ ಶಿಕ್ಷಣ ಬದಲಾವಣೆಯಲ್ಲಿ ಹೊಸ ಹೆಜ್ಜೆಗಳು :**

ಶಿಕ್ಷಣ ಕ್ಷೇತ್ರ ಇತ್ತೀಚೆಗೆ ಪರಿವರ್ತನೆಯ ಹಾದಿಯನ್ನು ಹಿಡಿದಿದೆ. ಇದು ಅತ್ಯಂತ ಸಂತಸದಾಯಕದ ಸಂಗತಿ. ಆದರೆ ಇದು ವಿಪರೀತವಾಯಿತೇನೋ ಎನ್ನುವಷ್ಟು ಬದಲಾವಣೆಯ ಕಾರ್ಯ್ಯಗಳು ಜಾರಿಯಾಗುತ್ತಿವೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಿಭಿನ್ನ ರೀತಿಯಲ್ಲಿ ಚಿಂತನೆ ನಡೆಸುತ್ತಾ ಸುಧಾರಣೆಯ ಹೆಸರಿನಲ್ಲಿ ಹೊಸ ಹೊಸ ಕಾನೂನುಗಳನ್ನು ಪ್ರಯೋಗಿಸುತ್ತಿವೆ. ಇದಕ್ಕೆ ದಿನಕ್ಕೊಂದು ಸುತ್ತೋಲೆಗಳು ಆಗಮನವಾಗುತ್ತಿರುತ್ತವೆ. ಸರ್ಕಾರದ ಉತ್ತಮ ಕಾರ್ಯಕ್ರಮಗಳು ಜಾರಿಯಾಗಿವೆ. ಬಿಸಿಯೂಟ, ಶಾಲೆಬಿಟ್ಟ ಮಕ್ಕಳಿಗೆ ಚಿಣ್ಣರಅಂಗಳ, ಏಜ್ಯುಸ್ಯಾಟ್, ಅರ್ಹತೆಯ ಆಧಾರದ ಮೇಲೆ ಶಿಕ್ಷಕರ ನೇಮಕ, ಇತ್ಯಾದಿ ಹೊಸ ಯೋಜನೆಗಳು ಹಾಗೂ ಕಾರ್ಯಕ್ರಮಗಳು ಇವುಗಳು ಶೈಕ್ಷಣಿಕ ಪ್ರಗತಿಗೆ ನೆರವಾಗಿವೆ.

ಶಿಕ್ಷಣ ಕ್ಷೇತ್ರದಲ್ಲಿ ಬದಲಾವಣೆ ನಿರಂತರ ಪ್ರಕ್ರಿಯೆಯಾಗಿದೆ. ಇದರಲ್ಲಿ ಸರ್ವ ಶಿಕ್ಷಣ ಅಭಿಯಾನ ಯೋಜನೆ ಚಾಲ್ತಿಯಲ್ಲಿದೆ. ಸಾರ್ವತ್ರಿಕ ಕಲಿಕೆಯ ಸಾಧನೆ ಮತ್ತು ಬಲ ಸಂವರ್ಧನೆಯೇ ಇದರ ಪ್ರಮುಖ ಉದ್ದೇಶವಾಗಿದೆ. ತರಗತಿ ಬೋಧನೆ ಪ್ರಕ್ರಿಯೆಗಳು ಫಲಪ್ರದವಾದರೆ ಶಿಕ್ಷಣದ ಗುಣಮಟ್ಟ ಸುಧಾರಣೆಯಾಗುತ್ತದೆ. ಶಿಕ್ಷಕರಿಗೆ ವ್ಯವಸ್ಥಿತ ಪುನಃಶ್ಚೇತನ





ತರಬೇತಿ, ಕಾರ್ಯಾಗಾರಗಳು, ಮಾರ್ಗ ದರ್ಶನ ನೀಡುವುದು ಅಗತ್ಯ. ಶೈಕ್ಷಣಿಕ ಆಚರಣೆ, ನೀತಿ ನಿರೂಪಣೆ, ಬೋಧನೆ, ಪಠ್ಯಕ್ರಮ, ಮೌಲ್ಯಮಾಪನ, ಹೊಸ ಯೋಜನೆಗಳು ಇವುಗಳೆಲ್ಲಾ ನಮ್ಮ ಸಮಸ್ಯೆಗಳ ಪರಿಹಾರಕ್ಕೆ ಅನುಕೂಲಕರವಾಗಿರುತ್ತವೆ. ವೈಜ್ಞಾನಿಕ ಪದ್ಧತಿಗಳು ಅವುಗಳನ್ನು ಅರಿತು ಉತ್ತಮ ಗುಣಮಟ್ಟದ ಶಿಕ್ಷಣ ನೀಡುವುದು ನಮ್ಮ ಗುರಿಯಾಗಿದೆ.

**ಉಪಸಂಹಾರ :**

ಮಕ್ಕಳು ಕಲಿಕೆಯಲ್ಲಿ ಹಿಂದುಳಿಯುವಲ್ಲಿ ಸರ್ವರೂ ಸಮಭಾಗಿಗಳಾಗಿರುವರು. ಎಲ್ಲರೂ ಸೇರಿ ಮಕ್ಕಳಿಗೆ ಓದು ಬರಹಕ್ಕೆ ನೆರವಾಗಬಲ್ಲ ಸಾಮರ್ಥ್ಯ ಮತ್ತು ಸುಂದರ ಪರಿಸರ ನಿರ್ಮಿಸಬೇಕಿದೆ. ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೆ ಪಾಠ, ಪಠ್ಯ, ಸಲಕರಣೆ ಮತ್ತು ಮಾದರಿಗಳಿಂದ ಬೋಧಿಸಿ ಅವರನ್ನು ಶಿಕ್ಷಣದ ಮುಖ್ಯವಾಹಿನಿಗೆ ತರುವ ಗುರುತರ ಜವಾಬ್ದಾರಿ ನಮ್ಮ ಮೇಲಿದೆ. ಬಾಲಕಿಯರು ಹೆಚ್ಚು ಸಂಖ್ಯೆಯಲ್ಲಿ ಶಿಕ್ಷಣ ಪಡೆಯುವಂತೆ ಎಲ್ಲ ರೀತಿಯ ಪ್ರೋತ್ಸಾಹ ಕಲ್ಪಿಸುವುದು ನಮ್ಮ ಕರ್ತವ್ಯವಾಗಬೇಕಿದೆ. ಶಾಲೆಗಳ ಶೈಕ್ಷಣಿಕ ಪಾಠೋಪಕರಣಗಳು ಮತ್ತು ಉತ್ತಮ ಬೋಧನಾ ಸಾಮಾಗ್ರಿಗಳನ್ನು ಸುಸಜ್ಜಿತಗೊಳಿಸಬೇಕು. ಶಿಕ್ಷಕರು ಸರ್ವ ರೀತಿಯಲ್ಲಿ ಸಿದ್ಧರಾಗಿ ಆಸಕ್ತಿಯಿಂದ ಮಕ್ಕಳಿಗೆ ಕಲಿಸುವುದು ಸೂಕ್ತವಾಗಿದೆ.

ಶಿಕ್ಷಣದ ಓರೆ ಕೋರೆಗಳು, ಲೋಪ ದೋಷಗಳು, ಕುಂದು ಕೊರತೆಗಳನ್ನು ನೀಗಿಸುವ ಶಕ್ತಿ ನಮ್ಮ ಶಿಕ್ಷಕರಲ್ಲಿ ಹೆಚ್ಚಾಗಬೇಕು. ನಮ್ಮ ಇಲಾಖೆಗಳು ಶಿಕ್ಷಕರಿಗೆ ಹೊರೆ ಕಡಿಮೆಮಾಡಿ, ಸೌಲಭ್ಯಗಳನ್ನು ಹೆಚ್ಚಿಸಿ, ಯೋಜನಾಬದ್ಧ ನಿಯಮಗಳನ್ನು ತಯಾರಿಸಬೇಕಾಗಿರುವುದು ಅನಿವಾರ್ಯವೂ ಅವಶ್ಯಕವೂ ಆಗಿದೆ. ಶಿಕ್ಷಕರ ತರಬೇತಿ ಗಳಲ್ಲಿ ಅಮೂಲಾಗ್ರ ಬದಲಾವಣೆ ಮಾಡಬೇಕಿದೆ. ಗುಣ ಮಟ್ಟದ ಹಾಗೂ ಮೌಲ್ಯಾಧಾರಿತ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಬೇಕಾಗಿದೆ. ಬರೀ ಶಿಕ್ಷಕರಿಂದಷ್ಟೇ ಮಗುವಿನ ಕಲಿಕೆ ನಡೆಯದು, ಅದರ ಜೊತೆಗೆ ಪಾಲಕರು, ಪೋಷಕರು ಹಾಗೂ ಸಮುದಾಯ ತಮ್ಮ ಮಗುವಿನ ಶೈಕ್ಷಣಿಕ ಪ್ರಗತಿ ಬಗ್ಗೆ ಎಚ್ಚೆತ್ತುಕೊಳ್ಳುವುದು ಅಗತ್ಯವಾಗಿದ್ದು ಈ ದಿಸೆಯಲ್ಲಿ ಸರ್ವರೂ ಜಾಗರೂಕತೆಯ ಚಿಂತನೆಯನ್ನು ನಡೆಸಬೇಕಾಗಿದೆ. □

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ
ಅಧ್ಯಾಯ –೨೧
ಗೃಹಧರ್ಮ

### ದುಷ್ಕರ್ಮ ಭಯ

ದುಷ್ಟರಂಜರು ದುಷ್ಕರ್ಮವನ್ನೆಸಗಲು ;
ಶ್ರೇಷ್ಠರಂಜುವರು ದುಷ್ಕರ್ಮವೆಂಬ ಗರ್ವಕೆ.

ದುಷ್ಕರ್ಮವು ಕೆಡುಕನೇ ಫಲಿಸುವುದು, ಅದರಿಂದದಕೆ
ಬೆಂಕಿಗಿಂತ ಮಿಗಿಲಾಗಿ ಅಂಜುವುದು.

ಅರಿವಿನಲ್ಲೆಲ್ಲಾ ಶ್ರೇಷ್ಠ ಅರಿವೆಂಬರು, ಕೆಡುಕನು
ತನ್ನ ಹಗೆಗಳಿಗೂ ಎಸೆಗದಿರುವುದನು.

ಮರೆತೂ ಅನ್ಯರಿಗೆ ಕೇಡ ಬಗೆಯಲಾಗದು; ಬಗೆದರೆ
ಧರ್ಮ ಬಗೆವುದವಂಗೆ ಕೇಡನು.

ಬಡವ ತಾನೆಂದು ಕೇಡನೆಸಗದಿರು; ಎಸಗಿದರೆ
ಬಡವನಾಗುವೆ ಮತ್ತಿನಿತು.

ಕೇಡುಗಳ ಪರರಿಗೆ ಎಸಗದಿರುವುದು, ದುಃಖವು
ತನಗೆ ಬೇಡವೆಂದು ಬಯಸುವವನು.

ಹಗೆಗಳು ಎಂಥವರಿದ್ದರೂ ಎಂತೋ ಬದುಕಲಿಬಹುದು;
ತನ್ನ ದುಷ್ಕರ್ಮದ ಹಗೆ ಬೆಂಬಿಡದೆ ಪೀಡಿಪುದು.

ಕಾಲಡಿಯ ಬಿಟ್ಟಗಲದ ನೆಳಲಿನಂತೆ, ಕೇಡು
ಹಿಂಬಾಲಿಪುದು ಕೇಡೆಸಗಿದವರನು.

ತನ್ನ ತಾನು ಪ್ರೀತಿಸ ಬಯಸುವವನು, ಕಿರಿದನಿತೂ
ಕೇಡಾದುದನು ಮಾಡದಿರುವುದು.

ಧರ್ಮವ ತೊರೆದು ದುಷ್ಕೃತ್ಯವನು ಮಾಡದವಂಗೆ,
ಕೇಡಿಲ್ಲವೆಂಬುದನು ಅರಿವುದು.

## ದಾನವತೆ ಅಳಿದು ಮಾನವಪ್ರಜ್ಞೆ ಜಾಗೃತವಾಗಲಿ

-ಸ.ರಾ. ಸುಳಕೂಡೆ *

ಭೌತಿಕವಾಗಿ ಉನ್ನತಿ ಸಾಧನೆಗೆ ಮಹತ್ವವಿದೆ. ಇಹದ ಬದುಕಿಗೆ ಮೂಲಭೂತ ಸೌಕರ್ಯಗಳು ಅಗತ್ಯ. ಮಾನವ ಬದುಕಿನಲ್ಲಿ ಅದು ಬೇಕು, ಇದು ಬೇಕು ಎಂಬ ಆಸೆಗೆ ಕಡಿವಾಣವಿಲ್ಲದೆ ಹೋದರೆ ಬೇಕು, ಬೇಕುಗಳೇ ಬೇಡಿ ಗಳಾಗುತ್ತವೆ, ಮಗ್ಗುಲ ಮುರಿಯುತ್ತವಲ್ಲದೆ ದಾನವ ಹಾವಳಿಗೂ ಪ್ರೇರಣೆ ನೀಡುತ್ತವೆ. ನಾವು ಸುಧಾರಣೆ, ಸಂತಸ, ಹಿತ, ಸಿರಿತನ, ಸುಖಕ್ಕಾಗಿ ಹೋರಾಡಬೇಕಾಗುತ್ತದೆ. ಪೈಪೋಟಿಯನ್ನು ಎದುರಿಸಬೇಕಾಗುತ್ತದೆ. ಸ್ಪರ್ಧೆಯಿಲ್ಲದೆ ಬದುಕು ಇರಲಾರದು, ಇರಬಾರದು. ಸ್ಪರ್ಧೆ ಯಾವತ್ತು ಬದುಕು ಕಟ್ಟಲು, ಸಮೃದ್ಧಿಯತ್ತ ಸಾಗಬೇಕು ವಿನಾ ರಕ್ತಪಾತಕ್ಕೆ ಕೊಲೆ, ಸುಲಿಗೆ, ಹಿಂಸೆಗೆ ತಳಹದಿಯಾಗಬಾರದು.

ಇಂದು ಜಗತ್ತಿನ ತುಂಬ ನಡೆದಿರುವ ವಿವೇಕರಹಿತವಾದ ಸ್ಪರ್ಧೆ, ಪೈಪೋಟಿ, ಚಟುವಟಿಕೆಗಳು ಮಾನವ ಬದುಕಿನ ಮರ್ಯಾದೆಯನ್ನು ನಿತ್ಯ ಹರಾಜಿಗೆ ಹಾಕುತ್ತಲಿವೆ. ನಾ ಹೆಚ್ಚು ಅವ ತುಚ್ಛ, ಅವನನ್ನು ತುಳಿಯಲೇಬೇಕು, ಆ ಜಾತಿಯವ ಅವರನ್ನು ಸುಟ್ಟುಹಾಕಿ, ಆ ಜನಾಂಗ ತಲೆಯೆತ್ತಿ ಬಾಳದಂತೆ ಮಾಡಿ, ದಾಳಿ ಮಾಡಿ ಬಾಂಬು ಹಾಕಿ, ಏಳ್ಗೆಯನ್ನೆಲ್ಲ ಕೊಚ್ಚಿ ಹಾಕಿ, ವಿನಾಕಾರಣ ಜಗಳ ಹಚ್ಚಿಕೊಳ್ಳಿ ಇಡಿ ಬೆಂಕಿ ಹಚ್ಚಿ ಮುಂತಾದ ಮನೋಗತ ಗಳನ್ನು ನಿಯಂತ್ರಿಸಲು ಹೊರಟಿರುವ ಮಾನವ ಹಕ್ಕುಗಳ ರಕ್ಷಕರು, ಕಾನೂನು ಮತ್ತು ಹೃದಯವಂತರು ಎಲ್ಲಿಲ್ಲದ ಕಿರುಕುಳವನ್ನು ಎದುರಿಸುತ್ತಿದ್ದಾರೆ. ಜಗತ್ತಿನ ಶಾಂತಿ-ಸೌಹಾರ್ದ, ಮಾನವ ಪ್ರೀತಿ, ಸಹೋದರಭಾವ, ನೈಜ ಬದುಕಿನ ತತ್ವವನ್ನು ಪಸರಿಸುವ ಸಾಧುಗಳು ಮುಜುಗರಕ್ಕೆ ಒಳಗಾಗಿದ್ದಾರೆ.

*'ಯಾವ ಜಾತಿಯೆಂದು ಸಾಧುವನು ಕೇಳುವುದು ಲೇಸಲ್ಲ*
*ಬ್ರಹ್ಮ ಕ್ಷತ್ರಿಯ ವೈಶ್ಯ ಮತ್ತಿತರ ಮೂವತ್ತಾರು ಜಾತಿಗಳು*
*ದೇವರನೆ ಅರಸುತಿವೆ*
*ಶರಣನ ಜಾತಿಯ ಕೇಳುವವ ಮೂರ್ಖ'*

ಇಂದು ಪ್ರತಿಹಂತದಲ್ಲೂ ಸ್ವ-ಕೇಂದ್ರವು ನಿರ್ಮಾಣಗೊಳ್ಳುತ್ತಲಿದೆ. ಇಂದು ವಿಶಾಲತೆಗೆ ಮಾನ್ಯತೆ ದೊರೆಯದೆ ಹೋಗುತ್ತಿರುವುದರಿಂದ ಮಾನವತೆಯತ್ತ ಗಮನ ಹರಿಸದಷ್ಟು ಮದ, ಮತ್ಸರ, ದ್ವೇಷ, ಅಸೂಯೆ ತಾಂಡವ ರೂಪ ತಾಳಿವೆ. ಎತ್ತ ನೋಡಿದತ್ತ ಸ್ವಾರ್ಥಪರ ನಡತೆ ದಾಪುಗಾಲು ಹಾಕುತ್ತ ನಡೆದಿದೆ. ಮಾನವ-ಮಾನವರಲ್ಲಿ ಬೆಳೆದು ನಿಂತಿರುವ ಹಗೆತನ ರಾಕ್ಷಸ ಪ್ರವೃತ್ತಿಯನ್ನು ಮೀರಿಸಿದಂತಿದೆ. ಜಾತಿ, ದೇವರು, ಸಂಪ್ರದಾಯದ ಬಿರುಗಾಳಿಗೆ ಸಿಲುಕಿ ಕೊಂಡಿರುವ ಮನುಷ್ಯರನ್ನು ಮಾನವೀಯಗೊಳಿಸುವಲ್ಲಿ 'ದಾನವತೆ' ಅಡ್ಡವಾಗಿದೆ.

'ಮಾನವ ಜಾತಿ ತಾನೊಂದೇ ವಲಂ' ಎಂಬ ಸದಾಶಯ ಹೊತ್ತು ಮುನ್ನಡೆಯಲು ಸಾಕಷ್ಟು ಶ್ರಮಿಸುತ್ತಿರುವ ಮಾನವತಾವಾದಿಗಳು ಮಾನವ-ಮಾನವರಲ್ಲಿಯ ಘರ್ಷಣೆ ತರವಲ್ಲೆಂದು ಹಿತವಚನ ಹೇಳಿದ್ದಾರೆ. ೧೨ನೇ ಶತಮಾನದಲ್ಲಿ ಕಲ್ಯಾಣದ ಶರಣರು ಮಾನವ ಪ್ರೀತಿ, ಕಾಯಕ, ದಾಸೋಹ ತತ್ವದಡಿಯಲ್ಲಿ 'ಮಾನವಪ್ರಜ್ಞೆ' ಬೆಳಗಿಸಲು ಮುಂದಾದರು. ಮೇಲು-ಕೀಳು, ಬಡವ-ಬಲ್ಲಿದ, ಆ ಜಾತಿ, ಈ ಕುಲವೆನ್ನದೆ ನಡೆ-ನುಡಿಗಳಲ್ಲಿ ಏಕತೆ ಸಾಧಿಸಿದ ಶರಣರು ಜಗತ್ತಿನಲ್ಲಿಯ ತಾರತಮ್ಯ ಭಾವವನ್ನು ತೊರೆದು ನಿಲ್ಲುವ ಸರಳ ಮಾರ್ಗ ವನ್ನು ತೋರಿಸಿದರು. ಸತ್ಯಶುದ್ಧ ಕಾಯಕವೇ ಮಾನವ ಪ್ರೀತಿಯನ್ನು ಫಲಪ್ರದಗೊಳಿಸುವ ಮತ್ತು ಸ್ವಾವಲಂಬಿ ಬದುಕಿನ ದಾರಿ ಎಂಬುದೇ ಶರಣರ ದಿವ್ಯ ದರ್ಶನವಾಗಿದೆ. ಇದು ಮಾನವ ಬದುಕಿನ ದಾರಿಯೂ ಆಗಿದೆ.

ಆ ಧಾರ್ಮಿಕ ನಂಬಿಕೆಗಳು ಸ್ವ-ಕೇಂದ್ರ ನಿರ್ಮಿಸುತ್ತಿರುವುದರಿಂದ ಜಾತಿವಾದ, ಮತಾಂಧತೆ, ಮತಾಂತರಕ್ಕೆ ದಾನವ ಶಕ್ತಿಗಳು ಚುರುಕಾಗಿ, ಕಾರ್ಯ ನಿರ್ವಹಿಸುತ್ತಲಿವೆ. ತಾನು, ತನ್ನವರು ಹೆಚ್ಚಾಗಬೇಕೆಂಬ ಕುವಿಚಾರವು ಮಾನವತೆಯ ಪ್ರೀತಿಯನ್ನು ಬಲಿ ತೆಗೆದುಕೊಳ್ಳುವ ಜೊತೆಗೆ ಅಭಿವೃದ್ಧಿಯ ದಿಕ್ಕನ್ನೇ ಬದಲಿಸುತ್ತಲಿದೆ. ಪ್ರಕೃತಿಯು ನೀಡಿರುವ ಸಂಪತ್ತನ್ನು ಹಾಳುಗೆಡವುತ್ತಿರುವ ದಾನವ ಪ್ರವೃತ್ತಿ ಮಾನವ ಬದುಕನ್ನು ಪ್ರಳಯದಂಚಿಗೆ ತಲುಪಿಸುತ್ತಲಿದೆ. ವಿಶ್ವದೊಳಗೆ ನಡೆಯು ತ್ತಿರುವ ಯುದ್ಧಗಳು, ಭಯೋತ್ಪಾದನೆ, ಕೃತ್ಯ-ಕಲಹಗಳು ಧಾರ್ಮಿಕತೆಯ ಸೋಗು ಹಾಕಿಕೊಂಡು ಮನುಷ್ಯತ್ವದ ದಿಕ್ಕು ಬದಲಿಸುತ್ತಲಿವೆ. ಧರ್ಮಕ್ಕಾಗಿ 'ಆಹುತಿ' ಇದು ದಾನವತೆಯ ಕರಾಳ ಮುಖವೇ ಆಗಿದೆ. ಧರ್ಮ ಶ್ರೇಷ್ಠತೆಯು ಮನುಷ್ಯ ಮನುಷ್ಯರಲ್ಲಿ ಒಕ್ಕಟ್ಟು ತರುವುದಕ್ಕಾಗಿ ಇರಬೇಕೇ ವಿನಹ ಒಬ್ಬರೊನ್ನೊಬ್ಬರು ದ್ವೇಷಿಸುವುದಕ್ಕಿರ ಬಾರದು. ಕುಲಮದದೊಳಗೆ ಮಾನವತೆಯ ದ್ವೇಷ, ಅಸೂಯೆಗಳ ತಲ್ಲಣದತ್ತ ಸಾಗಿದೆ. ಎಲ್ಲ ರಾಷ್ಟ್ರಗಳಲ್ಲಿ ಜಾತಿ ಕಲಹ, ವರ್ಣ ಭೇದವು ಇಂದಿಗೂ ತನ್ನ ಗತ್ತುಗಾರಿಕೆಯನ್ನು ಉಳಿಸಿಕೊಂಡಿದೆ. ಇದು ಮನುಕುಲಕ್ಕೆ ಮಹಾಮಾರಿ ಯಾಗಿ ನಿಂತಿದೆ. ಇಂದಿನ ಅಗತ್ಯತೆ ಇದಾಗಬಾರದು. 'ಎರಡೇ ಕುಲಗಳು ಉಳಿಯಲಿ, ಉಳಿದೆಲ್ಲ ಕುಲಗಳು ಅಳಿಯಲಿ, ಜಾತಿ ಮತ ವಂಶ ವರ್ಣ ಎಂಬ ಮಾತು ಮೂಲೆಗುಂಪಾಗಲಿ, ಭಕ್ತರು ಭವಿಗಳು ಎಂಬೆರಡೇ ಕುಲಗಳು ಉಳಿಯಲಿ, ಭವಿಗಳೂ ಭಕ್ತರಾಗಿ ಕೊನೆಗೊಂದೇ ಕುಲ ಉಳಿಯಲಿ' ರಾಷ್ಟ್ರ-ರಾಷ್ಟ್ರಗಳ ನಡುವೆ ಸೌಹಾರ್ದತೆ ಏರ್ಪಡಿಸಲು ರಾಜ್ಯತಾಂತ್ರಿಕ ಸಮಾಲೋಚನೆ ಇದೆ. ಆದರೆ ಜನರ-ಜನರ ನಡುವೆ ಅಪನಂಬಿಕೆ, ಜಾತಿ-ಕುಲ-ಭಾಷೆ ಮುಂತಾದುವುಗಳ ಭೇದಭಾವವನ್ನು ಹೆಚ್ಚಿಸುವುದು ಅವ್ಯಾಹತವಾಗಿ ನಡೆದುಬಂದಿದೆ. ನಾಗರಿಕತೆ, ನವ ನಾಗರೀಕತೆ, ಆಧುನಿಕತೆ ಎಂದು ಒಬ್ಬರನ್ನೊಬ್ಬರು ಹೀಯಾಳಿಸುವಿಕೆ, ಕೀಳಾಗಿ ನೋಡುವಿಕೆ ವಾಸ್ತವತೆ ಯಾಗಿದೆ. ತುಂಬಾ ನಯ-ನಾಜೂಕು ಬೆಳೆಸಿಕೊಂಡವರು ಇತರರನ್ನು ಕೊಳಕು ಅನಾಗರಿಕರು, ಹುಂಬರು, ಅಸಂಸ್ಕೃತರೆಂದು ತಾತ್ಸಾರ ಭಾವದಿಂದ ನಡೆಸಿಕೊಳ್ಳು ತ್ತಿರುವ ಬಗ್ಗೆ ಹೆಚ್ಚಿಗೆ ಹೇಳಬೇಕಿಲ್ಲ. ನಮ್ಮ ಸುತ್ತಮುತ್ತ ಅನೇಕ ಅಸಂತುಷ್ಟ, ಅತೃಪ್ತಿ, ಅನಾದಾರ ವಾತಾವರಣ ಪಸರಿಸಿಕೊಂಡಿದೆ. ಜೀವ, ಜೀವನ ವಿರೋಧಿ ತತ್ವಗಳನ್ನು ಕಡೆಗಣಿಸಿ ಬದುಕಲು ಪ್ರಜ್ಞಾವಂತರು ಹಲವು ಬಾರಿ ಸಮರ್ಥವಾಗಿ ತೂಗಿ ನೋಡಿ ಆದರ್ಶವನ್ನು ಪ್ರತಿಪಾದಿಸಿದ್ದಾರೆ. ಈ ಪ್ರತಿಪಾದನೆಯಲ್ಲಿ ವ್ಯಕ್ತವಾಗಿರುವ ವಿಶಾಲ ಮನೋಭಾವವು ಅನುಷ್ಠಾನಕ್ಕೆ ಬಂದಿಲ್ಲ. ಅನುಷ್ಠಾನಕ್ಕೆ ತರುವವರನ್ನು ಹಂಗಿಸಲಾಗುತ್ತಿದೆ. ಇವನೊಬ್ಬ ಸತ್ಯ ಹರಿಶ್ಚಂದ್ರನ ಮೊಮ್ಮಗನೆಂದು ಮೂದಲಿಸಲಾಗುತ್ತಿದೆ. ಅಣಕವಾಡಲಾಗುತ್ತಿದೆ. ಜಗತ್ತಿನ ಜನರಲ್ಲಿ ವಿಶಾಲ ಮನೋ ಭಾವ ಬೆಳೆದರೆ ಜಾತಿ ಭಾವ ಅಳಿಯುವಲ್ಲಿ ಸಂಶಯವಿಲ್ಲ. ಆದರೆ ಜಾತಿವಾದ ಬೆಳೆಸುವುದೇ ಆದರ್ಶವಾಗಿದೆ. ಮನುಷ್ಯನು ತನ್ನ ಸುತ್ತ ಹಬ್ಬಿಸಿಕೊಂಡಿರುವ ಬೇಲಿಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲಿವೆ. ವಿಶಾಲತೆಗೆ ಎದುರಾಳಿತನವು ವಿರೋಧತನವು ಬೆಚ್ಚಿ ಬೀಳಿಸುವ ಮಟ್ಟ ತಲುಪಿದೆ. ಜನಾಂಗ ಜನಾಂಗದಲ್ಲಿ ಜಗಳಾಟವು ಮಿತಿ ಮೀರಿ ನಿಂತಿದೆ. ಭಾರತವು ವಿಶ್ವಕ್ಕೆ ಸಾಮರಸ್ಯ ಬದುಕಿಗೆ ಮಾದರಿ ಯಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಒಗ್ಗಟ್ಟು, ಸಹಜೀವನ, ಸರಳ ಜೀವನ ಅತ್ಯಂತ ಮಧುರವಾಗಿತ್ತು. ಜಾತಿ, ವಿಜಾತಿ ಎನ್ನದೇ ಕೂಡಿ ಬಾಳುವಕಲೆ ಮನೆ ಮಾತಾಗಿತ್ತು. ಸ್ವಾತಂತ್ರ್ಯಗಳಿಸಿದ ನಂತರ ನಾವೆಲ್ಲರೂ ಒಂದೊಂದು ವಿಭಾಗಗಳಲ್ಲಿ ಹರಿದು ಹಂಚಿ ಹೋಗಿದ್ದೇವೆ. ಗಡಿ, ಭಾಷೆ, ಜನಾಂಗವೆಂದು ಬಡಿದಾಡುವುದೇ ಹೆಗ್ಗಳಿಕೆಯಾಗಿ ಪ್ರಾದೇಶಿಕತೆ ನೆಲೆಯೊಳಗೆ ಯೋಚಿಸತೊಡಗಿದ್ದೇವೆ. ನಮ್ಮ ಸಂವಿಧಾನವು ಸಕಲರ ಪ್ರಗತಿಗೆ ಸಮಾನವಾದ ಹಕ್ಕು ಬಾಧ್ಯತೆಗಳನ್ನು ಘೋಷಿಸಿದೆ. ಈ ಹಕ್ಕು ಬಾಧ್ಯತೆಗಳನ್ನು ಹತ್ತಿಕ್ಕುವುದೇ ಇಂದಿನ ನಾಗರಿಕ ಲಕ್ಷಣವಾಗಿದೆ. ನಾವು ಸಹೋದರ ಭಾವದಿಂದ ಇರಬೇಕೆಂಬುದನ್ನು ಮರೆತಂತೆ ವರ್ತಿಸಲಾಗುತ್ತಿದೆ. ರಾಷ್ಟ್ರೀಯ ಪ್ರಜ್ಞೆಯು ಪದೇ ಪದೇ ಸಂಕಟಕ್ಕೆ ಸಿಲುಕಿದೆ. ರಾಷ್ಟ್ರೀಯ ಬಿಕ್ಕಟ್ಟು ನಮ್ಮ ವ್ಯಕ್ತಿತ್ವ ಬಿಕ್ಕಟ್ಟಿನ ಇನ್ನೊಂದು ಮುಖವಾಗಿದೆ. ಇದು ಮಾನವ ಪ್ರಜ್ಞೆಯ ಅನುಪಸ್ಥಿತಿಯನ್ನು ಸೂಚಿಸಲಾಗುತ್ತದೆ. ಮಾನವ ಪ್ರಜ್ಞೆ ಹೀಗಾಗಬಾರದು. 'ಮಾನವ ಪ್ರಜ್ಞೆಯ ಬದಲು ದಾನವ ಪ್ರಜ್ಞೆ ಜಾಗೃತವಾಗು ತ್ತಿರುವುದು ತುಂಬಾ ವಿಷಾದಕರ ಎಂಬ ಸಿದ್ಧಗಂಗಾ ಮಠಾಧೀಶ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಂದೇಶದಲ್ಲಿ ಮಾನವ ಸಹಜ ಪ್ರೀತಿ ತುಂಬಿಕೊಂಡಿದೆ.

ಮಾನವ ಮಾನವರಲ್ಲಿ ತಮ್ಮ ತಮ್ಮ ಹಿತಸಾಧನೆ ಮುಖ್ಯವಾಗುತ್ತ ಹೋದಂತೆ ಪರಪೀಡನೆಯು ಸಾಕಷ್ಟು ಪಳಗಲು ಅವಕಾಶ ದೊರೆಯುತ್ತದೆ. ಪರಪೀಡನೆಯು ಸ್ವಾರ್ಥ ಸಾಧನೆಯ ಕೇಂದ್ರ ಬಿಂದುವಿನಲ್ಲಿಯೇ ಪ್ರಮುಖ ವಾದುದ್ದಾಗಿದೆ. ಸ್ವಾರ್ಥ ಸಾಧನೆ ನಮ್ಮ ಮನೋಧರ್ಮ ವಾಗಲು ಇರುವ ಕಾರಣಗಳತ್ತ ಗಮನ ಹರಿಸಿದಾಗ ಅರಿವು ಮೆಲ್ಲ ಮೆಲ್ಲನೆ ಪ್ರಕಾಶಿತಗೊಳ್ಳುತ್ತದೆ. ಅರಿವಿನ ಪ್ರಕಾಶವು ಹೆಚ್ಚಾದಂತೆ ದಾನವ ಪ್ರಜ್ಞೆ, ಮತ್ತೊಬ್ಬರನ್ನು ತುಳಿದು ಬದುಕುವ ಹವ್ಯಾಸವು ಕ್ಷೀಣಿಸುತ್ತ ಹೋಗುತ್ತದೆ. ಇದು ಮನುಷ್ಯ ಪ್ರಜ್ಞೆಯ ದ್ಯೋತಕ ವೆಂದು ಕರೆಯಲಾಗುತ್ತದೆ.

ಬಸವಣ್ಣನವರು ಮನುಷ್ಯ ಮಿತಿಗಳನ್ನು ಅಧ್ಯಯನ ಮಾಡಿ ಅಂತರಂಗ-ಬಹಿರಂಗ ಶುದ್ಧಿಯ ಸುಲಭ ಮಾರ್ಗ ತೋರಿದ್ದಾರೆ. ಅಂತರಂಗ-ಬಹಿರಂಗ ಶುದ್ಧಿ ಜೀವನಕ್ರಮ ವಾಗಿದೆ. ಮಾನವ ಪ್ರಜ್ಞೆಯನ್ನು ಬೆಳೆಸುವ ಸೂತ್ರವೂ ಆಗಿದೆ. ಮಾನವಪ್ರಜ್ಞೆಯನ್ನು ಬೆಳೆಸಿಕೊಳ್ಳುವತ್ತ ಆಸಕ್ತಿ ಹೊಂದುವುದೇ ರಾಕ್ಷಸ ಪ್ರವೃತ್ತಿಯನ್ನು ತೊರೆಯುವುದಾಗಿದೆ. ನಮ್ಮ ನಡೆ- ನುಡಿ ಸಾತ್ವಿಕವಾದಂತೆ ರಾಕ್ಷಸ ಗುಣಗಳು ಬಹುದೂರ ಬಹುದೂರವಾಗಿ ಮನುಷ್ಯ ಪ್ರಜ್ಞೆ ಪ್ರಜ್ವಲಿಸುತ್ತದೆ. ಈ ಸ್ಥಿತಿ ತಲುಪಿದಾಗ ಮನುಷ್ಯ ಸಹ್ಯತೆಗೆ ಬಂದು ತಲುಪಿ ತನ್ನ ಆನಂದದೊಂದಿಗೆ ಇತರರಲ್ಲೂ ಆನಂದವನ್ನು ಹೆಚ್ಚಿಸುತ್ತಾನೆ.

❐

* 1319, ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥ ನಗರ, ಬೆಳಗಾವಿ ಜಿಲ್ಲೆ-590 016.

## ನಮ್ಮ ಆಹಾರ ಆರೋಗ್ಯ ಭಂಡಾರ

-ವಾಮನರಾವ್ ಹೊದಿಕೆ *

**ನಮಗೆ ಆಹಾರವು ಯಾಕೆ ಬೇಕು ?**

ರೇಲ್ವೆ, ಮೋಟಾರ್, ಯಂತ್ರಗಳಿಗೆ ಪೆಟ್ರೋಲ್, ಡೀಸಲ್, ಕಲ್ಲಿದ್ದಲು, ವಿದ್ಯುತ್ ಬೇಕಾಗುವಂತೆಯೇ ನಮ್ಮ ದೇಹಯಂತ್ರದ ಚಟುವಟಿಕೆಗಳನ್ನು ನಡೆಸಲು ನಮಗೆ ಆಹಾರ ಬೇಕಾಗುತ್ತದೆ.

ನಾವು ಸೇವಿಸುವ ಆಹಾರದಿಂದ ನಮ್ಮ ದೇಹದಲ್ಲಿ ಉಷ್ಣತೆಯು ಉಂಟಾಗುತ್ತದೆ. ಆಹಾರವು ರಸವಾಗಿ ರಕ್ತದಲ್ಲಿ ಸೇರಿ ಅಂಗಾಂಗಗಳಿಗೆಲ್ಲಾ ಮುಟ್ಟಿ, ದೇಹದ ಚಟುವಟಿಕೆಗಳೆಲ್ಲ ಸರಾಗವಾಗಿ ನಡೆಯುವಂತೆ ಮಾಡುತ್ತದೆ.

ಆದರೆ ಜಡಯಂತ್ರದ ಆಹಾರ ಕ್ರಿಯೆಗಳಿಗೂ ಮನುಷ್ಯನ ಆಹಾರದ ಕ್ರಿಯೆಗಳಿಗೂ ಹೆಚ್ಚಿನ ಅಂತರವು ಇದೆ. ಹೇಗೆಂದರೆ ನಾವು ಸೇವಿಸಿದ ಆಹಾರವು ನಮ್ಮ ದೇಹದ ಬೆಳವಣಿಗೆಗೂ ಸಹಾಯ ಮಾಡುತ್ತದೆ. ದೇಹದಲ್ಲಿ ಪ್ರತಿನಿತ್ಯ ಆಗುವ ಸವಕಳಿಯನ್ನು ಸರಿಪಡಿಸುತ್ತದೆ. ಅಂಗಾಂಗಗಳಲ್ಲಿಯ ಹರಿಮುರಿಗಳನ್ನೂ ದುರಸ್ತಿ ಮಾಡುತ್ತದೆ.

ನಮ್ಮ ಆಹಾರದಲ್ಲಿ ಗಾಳಿ, ನೀರು ಮತ್ತು ಅನ್ನ ಇವು ಮೂರು ಪ್ರಮುಖವಾದುವು. ಶುದ್ಧ ಗಾಳಿಯನ್ನು ಉಸುರಾಡಿಸದೆ ನಮಗೆ ಕ್ಷಣಕಾಲ ಸಹ ಬದುಕಿರಲು ಸಾಧ್ಯವಿಲ್ಲ. ಹುಟ್ಟಿದಂದಿನಿಂದ ಸಾಯುವವರೆಗೂ, ಒಂದು ಕ್ಷಣಕಾಲವೂ ಅವಕಾಶವಿರಿಸದೆ, ನಿದ್ದೆಯಲ್ಲಿ ಸಹ, ನಾವು ಉಸಿರಾಡಿಸುತ್ತ ಇರಲೇಬೇಕಾಗುತ್ತದೆ. ಹವೆಯು ಪ್ರತಿಯೊಂದು ಪ್ರಾಣಿಯ ಅನಿವಾರ್ಯವಾದ ಆಹಾರವಾಗಿದ್ದರೂ ನಮ್ಮ ಉಸಿರಾಟವು, ನಮ್ಮ ಪ್ರತ್ಯಕ್ಷ ಪ್ರಯತ್ನವಿಲ್ಲದೆ, ನಮಗೆ ಅರಿವು ಕೂಡ ಆಗದಂತೆ, ಹಗಲಿರುಳೂ ನಡೆಯುತ್ತಿರುವುದರಿಂದ, ನಮಗೆ ಅದು ಗೊತ್ತಾಗುವುದಿಲ್ಲ. ಹವೆಯು ನಮ್ಮ ಸೂಕ್ಷ್ಮ ಆಹಾರವಾಗಿದೆ.

ಎರಡನೆಯದಾಗಿ ನೀರು. ನಮ್ಮ ರಕ್ತವನ್ನು ಪ್ರವಾಹಿ ರೂಪದಲ್ಲಿ ಇರಿಸಲಿಕ್ಕೂ, ನಾವು ಸೇವಿಸಿದ ಆಹಾರವನ್ನು ಜೀರ್ಣಿಸಲಿಕ್ಕೂ, ಮಿಕ್ಕ ಉಳಿದ ಮಲಮೂತ್ರಗಳನ್ನು ಹೊರಗೆ ಹಾಕಲಿಕ್ಕೂ, ನಮಗೆ ವಿಪುಲವಾಗಿ ನೀರುಬೇಕು/ ನಾವು ಸೇವಿಸುವ ಪ್ರತಿಯೊಂದು ಆಹಾರದಲ್ಲಿಯೂ ನೀರಿನ ಪ್ರಮಾಣವೇ ಹೆಚ್ಚಿಗೆ ಇರುವುದರಿಂದ ನಮ್ಮ ದೇಹಕ್ಕೆ ಎಷ್ಟೊಂದು ನೀರು ಬೇಕಾಗುತ್ತದೆ ಎಂಬುದರ ಅರಿವೂ ಕೂಡ ನಮಗೆ ಇರುತ್ತಿರುವುದಿಲ್ಲ.

ಮೂರನೆಯದಾದ ಅನ್ನ, ರೊಟ್ಟಿ, ಪಲ್ಲೆ, ಮೊದಲಾದ ಜಡ ಆಹಾರಗಳಷ್ಟೇ ನಮ್ಮ ಕಣ್ಣಿಗೆ ಎದ್ದು ಕಾಣುತ್ತದೆ ಮತ್ತು ನಾವು ಅವುಗಳಿಗಷ್ಟೇ ಆಹಾರವೆನ್ನುತ್ತೇವೆ.

ಇಂಥ ಜಡ ಆಹಾರವನ್ನು ಬೆಳಿಸಲಿಕ್ಕೂ, ದೊರಕಿಸಲಿಕ್ಕೂ, ತಿನ್ನಲಿಕ್ಕೆ ತಕ್ಕಹಾಗೆ ತಯಾರಿಸಲಿಕ್ಕೂ, ನಾವು ತುಂಬಾ ಪರಿಶ್ರಮ ಪಡಬೇಕಾಗುತ್ತದೆ. ಇತರ ಪ್ರಾಣಿಗಳು ತಮ್ಮ ಇಡೀ ಆಯುಷ್ಯವನ್ನೂ, ಮನುಷ್ಯ ಪ್ರಾಣಿಯು ತನ್ನ ಆಯುಷ್ಯದಲ್ಲಿಯ ಬಹುಭಾಗವನ್ನು ಆಹಾರ ಸಂಪಾದನೆಗಾಗಿಯೇ ವ್ಯಯಿಸಬೇಕಾಗುತ್ತದೆ. 'ಎಲ್ಲರೂ ಮಾಡುವುದು ಹೊಟ್ಟೆಗಾಗಿ' ಎಂದು ಹಾಡಲಿಕ್ಕೆ ಕಾರಣ. ಜಡ ಆಹಾರಕ್ಕಿಂತ ಗಾಳಿ-ನೀರುಗಳ ಅವಶ್ಯಕತೆ ಇನ್ನೂ ಹೆಚ್ಚಿದ್ದರೂ ಕೂಡ, ಅವು ಹೆಚ್ಚಿನ ಪರಿಶ್ರಮವಿಲ್ಲದೆ ದೊರೆಯುತ್ತವೆ. ಅನ್ನ-ರೊಟ್ಟಿಗಳನ್ನು ಮಾತ್ರ ದುಡಿದೇ ಸಂಪಾದಿಸಬೇಕಾಗುತ್ತದೆ. ನಮ್ಮ ಆಹಾರವನ್ನು ಜೀರ್ಣಿಸುವ ಕೆಲಸವನ್ನೆಲ್ಲ ನಮ್ಮ ಹೊಟ್ಟೆಯೇ ನಿರ್ವಹಿಸುತ್ತಿರುವುದರಿಂದಲೂ, ಹಸಿವೆಯನ್ನು ಸಾಮಾನ್ಯವಾಗಿ ಹೊಟ್ಟೆಯೇ ವ್ಯಕ್ತಪಡಿಸುತ್ತಿರುವುದರಿಂದಲೂ, ನಾವು ಆಹಾರ ಸೇವಿಸುವುದೆಲ್ಲ ಹೊಟ್ಟೆಗಾಗಿ ಎಂಬ ಕಲ್ಪನೆಯಾಗಿಬಿಟ್ಟಿದೆ. ಆದ್ದರಿಂದಲೇ ಆ ತರಹದ ಮಾತು ನಮ್ಮ ಬಾಯಿಂದ ಹೊರಡುತ್ತದೆ. ಆಹಾರವು ನಮ್ಮ ಇಡೀ ದೇಹಕ್ಕೂ ಇಡೀ ಜೀವಕ್ಕೂ ಬೇಕು. ಹೊಟ್ಟೆಯು ಅದನ್ನು ಸ್ವೀಕರಿಸಿ, ಪರಿವರ್ತಿಸಿ ಮುಂದೆ ಸಾಗಿಸುವ ಸಾಧನ ಮಾತ್ರ, ವಾಹನಮಾತ್ರ.

* ನಿಸರ್ಗ ಚಿಕಿತ್ಸಾ ಸಮಿತಿ. ಬೆಂಗೇರಿ, ಹುಬ್ಬಳ್ಳಿ.





## ಮಾವು

-ರಾಜಶೇಖರಯ್ಯ *

ಭಾರತದ ಪುರಾತನ ಹಣ್ಣುಗಳಲ್ಲಿ ಮಾವಿನಹಣ್ಣು ಒಂದು. ಸುಮಾರು 6000 ವರ್ಷಕ್ಕೂ ಹಳೆಯದು. ವೇದ ಮತ್ತು ಉಪನಿಷತ್ತುಗಳಲ್ಲಿ ಈ ಹಣ್ಣನ್ನು 'ಸ್ವರ್ಗದ ಹಣ್ಣು' (Heavenly fruit) ಎಂದು ಕರೆಯಲಾಗಿದೆ. ಪುರಾಣ ರೀತ್ಯ ಪಾರ್ವತಿ ಪರಮೇಶ್ವರರು ಹಿಮಾಲಯಕ್ಕೆ ಬಂದಾಗ ಸ್ವರ್ಗದ ಹಣ್ಣಾದ ಮಾವನ್ನು ತರದೆ ಮರೆತು ಬಂದಿದ್ದರು. ಪಾರ್ವತಿಗೆ ಮಾವು ಎಂದರೆ ಬಹು ಇಷ್ಟ. ಪಾರ್ವತಿಯ ಒತ್ತಾಯದ ಮೇರೆಗೆ ಪರಮೇಶ್ವರ ಮಾವನ್ನು ಭೂಲೋಕದಲ್ಲಿ ಸೃಷ್ಟಿಸಿದರು ಎಂದು ಪುರಾಣದಲ್ಲಿ ಹೇಳಲ್ಪಟ್ಟಿದೆ. ಈ ಸ್ವರ್ಗದ ಹಣ್ಣನ್ನು ಭೂಲೋಕದಲ್ಲಿ 'ಪವಿತ್ರಹಣ್ಣು' (Sacred fruit) ಎಂದು ಕರೆದರು. ಮೊದಲು ಭಾರತ ಬರ್ಮಾ ಗಡಿಯಲ್ಲಿ ಜನ್ಮತಾಳಿ ದಿನ ಕ್ರಮೇಣ ಮಾನವ ಅದರ ರುಚಿಗೆ ಮನ ಸೋತು ಬೆಳೆಯಲಾರಂಭಿಸಿದ. ಅಲೆಗ್ಸಾಂಡರ್, ಹ್ಯೂಯನ್ ತ್ಸಾಂಗ್, ಇಬನ್ ಬಟೂಟ ಮತ್ತು ಪೋರ್ಚುಗೀಸರು ಇದರ ರುಚಿಗೆ ಮಾರುಹೋಗಿ ತಮ್ಮ ದೇಶಕ್ಕೆ ಈ ತಳಿಯನ್ನು ಸಾಗಿಸಿ ಬೆಳೆದರು ಎಂಬ ಮಾಹಿತಿ ಇತಿಹಾಸದಲ್ಲಿ ದೊರಕಿದೆ.

ಪ್ರಸ್ತುತ ಮಾವು ಸುಮಾರು ೫೦೦ ತಳಿ ಹೊಂದಿದ್ದರೂ ಕೇವಲ ೩೫ ತಳಿಯನ್ನು ಮಾತ್ರ ಭಾರತದಲ್ಲಿ ಬೆಳೆಯುತ್ತಿದ್ದಾರೆ. ರಸಪೂರಿ, ಬಾದಾಮಿ, ಮಲಗೋಬ, ಸೇಂದೂರ, ತೋತಾಪುರಿ ಇತ್ಯಾದಿ ಹಣ್ಣುಗಳು ಬಾಯಲ್ಲಿ ನೀರೂರಿಸಿ ತೃಪ್ತಿ ನೀಡುವ ಪವಿತ್ರ ಹಣ್ಣುಗಳಾಗಿವೆ. ಭಾರತದಲ್ಲಿ ಸುಮಾರು ೯೮೮೭೭೨೦ ಟನ್‌ಗಳಿಗೂ ಹೆಚ್ಚು ಹಣ್ಣು ಬೆಳೆಯುತ್ತಿದ್ದಾರೆ.

ಮಾವಿನ ಕಾಯಿಯಲ್ಲಿ ಯಥೇಚ್ಛವಾದ ಬಿ೧ ಮತ್ತು ಬಿ೨ ವಿಟಮಿನ್‌ಗಳಿವೆ. ಐದೂವರೆ ಕೆ.ಜಿ. ಆಪಲ್ ಎರಡೂವರೆ ಕೆ.ಜಿ. ಬಾಳೆಹಣ್ಣು, ಅರ್ಧ ಕೆ.ಜಿ. ಕಿತ್ತಲೆ, ಒಂದು ಕೆ.ಜಿ. ಅನಾನಸ್‌ಹಣ್ಣುಗಳಲ್ಲಿ ಸಿಗುವ ವಿಟಮಿನ್ 'ಸಿ'ಒಂದು ಮಾವಿನಕಾಯಿ ತಿನ್ನುವುದರಿಂದ ದೊರೆಯುತ್ತದೆ. ಎಳೆಯ ಒಂದೆರಡು ಮಾವಿನಕಾಯಿಗಳನ್ನು ಉಪ್ಪು ಮತ್ತು ಜೇನುತುಪ್ಪದೊಡನೆ ಸೇವಿಸಿದರೆ- ಭೇದಿ, ಮಳೇರೋಗ, ಬಾಯಾರಿಕೆ, ಬೆವರುವುದು, ನಿಶ್ಯಕ್ತಿ ಶಮನವಾಗಿ ಅಜೀರ್ಣ ಮಾಯವಾಗುವುದು. ಮೆಣಸು ಮತ್ತು ಜೇನುತುಪ್ಪದೊಡನೆ ಸೇವಿಸಿದರೆ ಜಾಂಡೀಸ್ ಶಮನವಾಗುವುದು. ಮಾವಿನ ಚಿಗುರೆಲೆಗಳನ್ನು ಕಣ್ಣ ಮೇಲೆ ಹೊದಿಸುವುದರಿಂದ ಕಣ್ಣ ಉರಿ ತಣ್ಣಗಾಗುವುದು. ವೆಲ್ಡಿಂಗ್ ಮಾಡುವವರಿಗೆ ಇದೊಂದು ವರ ಪ್ರಸಾದವಾಗುವುದು. ಮಾವಿನಕಾಯಿ ತಿನ್ನುವುದರಿಂದ ಅನುಕೂಲವಿದೆಯೆಂದು ಒಂದೆರಡಕ್ಕಿಂತ ಹೆಚ್ಚು ತಿಂದರೆ- ಗಂಟಲ ಕೆರೆತ, ಅಜೀರ್ಣ, ಭೇದಿ ಹೊಟ್ಟೆನೋವು ಉಂಟಾಗುವುದು. ಇನ್ನು ಮಾವಿನಕಾಯಿ ಚಟ್ನಿ ಮತ್ತು ಉಪ್ಪಿನಕಾಯಿ ಎಂದರೆ ಒಂದೆರಡು ತುತ್ತು ಹೆಚ್ಚು ಊಟ ಮಾಡಬೇಕೆನಿಸುತ್ತದೆ. ಇವೆರಡಕ್ಕೆ ಒಗ್ಗರಣೆ ಕೊಟ್ಟರೆ ಕೊನೆಯಲ್ಲಿ ಊಟ ಮಾಡುವವರಿಗೆ ಅನ್ನ ಸಾಲದೆ ಬರಬಹುದು. ಅದಕ್ಕೆ ಹೇಳುವುದು -'ಕಾಯಕಕ್ಕೆ ತಡವಾದರೂ ಊಟಕ್ಕೆ ಹಾಜರ್' ಇರಬೇಕು ಹಸಿ ಉಪ್ಪಿನಕಾಯಿಗೆ ಆಯುಷ್ಯ ಒಂದೆರಡು ತಿಂಗಳಾದರೆ ಒಣಗಿಸಿದ ಮಾವಿನಕಾಯಿ ಉಪ್ಪಿನಕಾಯಿ ವರ್ಷಪೂರ್ತಿ ಇರುತ್ತದೆ. ಮಾನವ ಇವೆರಡನ್ನು ಏಕೆ ಇಷ್ಟಪಡುತ್ತಾನೆಂದರೆ ಇವುಗಳು ಹಸಿವು ಹೆಚ್ಚಿಸಿ ತಿಂದ ಆಹಾರವನ್ನು ಜೀರ್ಣಿಸಿ ಹೊಟ್ಟೆಯನ್ನು ಸ್ವಚ್ಛಗೊಳಿಸುವ ಶಕ್ತಿ ಇದೆ ಎನ್ನುವರು.

ಮಾವಿನಕಾಯಿ ಮರದಲ್ಲಿ ತೊಂಭತ್ತು ದಿನಗಳಲ್ಲಿ ಬೆಳೆದು ಬಲಿತು, ಒಂದೆರಡು ಹಣ್ಣು ಮರದಿಂದ ತಾನೇ ತಾನಾಗಿ ಬಿದ್ದ ಮೇಲೆ ಉಳಿದವುಗಳನ್ನು ಕೀಳುವುದು ಸೂಕ್ತ. ಕಿತ್ತ ಕಾಯಿಗಳನ್ನು ಹುಲ್ಲಲ್ಲಿ ಮುಚ್ಚಿದರೆ, ಏಳು ದಿನಗಳೊಳಗೆ ಬಣ್ಣ ಬಂದು ಹಣ್ಣಾಗುತ್ತವೆ. ಈ ರೀತಿಯ ಹಣ್ಣುಗಳು ತಿನ್ನಲು ಯೋಗ್ಯ, ರುಚಿಕರ ಹಾಗೂ ಆಹ್ಲಾದಕರ. ಇಂದಿನ ದಿನಗಳಲ್ಲಿ ರಸಾಯನಿಕ ಸಿಂಪಡಿಸಿ, ಹೊಗೆ ಹಾಕಿ, ಭಟ್ಟಿಯಲ್ಲಿಟ್ಟು ಶೀಘ್ರವಾಗಿ ಬಣ್ಣ ಬರುವಂತೆ ಮಾಡಿ ಮಾರಾಟ ಮಾಡುತ್ತಾರೆ. ಈ ಹಣ್ಣುಗಳು ತಿನ್ನಲು ಯೋಗ್ಯವಲ್ಲ ಮತ್ತು ರುಚಿಯಿರುವುದಿಲ್ಲ. ಹಣ್ಣುಗಳ ಮೇಲೆ ರಾಸಾಯನಿಕ ಸಂಯೋಜನೆಯಾಗುವುದರಿಂದ ಆರೋಗ್ಯದ ಮೇಲೆ ಅಡ್ಡ ಪರಿಣಾಮವಾಗುವುದು.

ಇಪ್ಪತ್ತೈದು ಮೊಟ್ಟೆ, ಎರಡೂವರೆ ಕೆ.ಜಿ. ಬೆಣ್ಣೆ,

* ನಿವೃತ್ತ ಪ್ರಾಂಶುಪಾಲರು, 'ಶ್ರೀ ಸಿದ್ಧಲಿಂಗಕೃಪ', ನಂ. ೧೧೨೮, ೩೬ನೇ ಕ್ರಾಸ್, ಎಸ್.ಐ.ಟಿ. ಮುಖ್ಯರಸ್ತೆ, ತುಮಕೂರು.

ಇಪ್ಪತ್ತೈದು ಲೋಟ ಹಾಲು ಇವುಗಳೊಂದರಲ್ಲಿ ಸಿಗುವ ವಿಟಮಿನ್ 'ಎ' ಒಂದು ಬಲಿತ ಹಣ್ಣಾದ ಮಾವಿನ ಹಣ್ಣಿನಲ್ಲಿ ದೊರೆಯುತ್ತದೆ. ನಿಜಕ್ಕೂ, ಆಶ್ಚರ್ಯದ ಸಂಗತಿಯೆಂದರೆ ಒಂದು ಹಣ್ಣಿನಲ್ಲಿರುವ ವಿಟಮಿನ್ 'ಬಿ'ನ್ನು ಪಡೆಯಲು ೩೫೦ ಕೆ.ಜಿ. ಅಕ್ಕಿ, ೫೦ ಕೆ.ಜಿ. ಗೋಧಿ, ೫೦ ಕೆ.ಜಿ. ತೊಗರಿಬೇಳೆ, ೩೦ ಕೆ.ಜಿ. ಹೆಸರು ಬೇಳೆ, ೭ ನಿಂಬೆಹಣ್ಣು, ಎರಡು ಆಪಲ್, ಒಂದು ಬಾಳೆಹಣ್ಣು ಒಂದೂವರೆ ಕಿತ್ತಲೆ ಹಣ್ಣುಗಳಲ್ಲಿ ಒಂದರಲ್ಲಿ ಸಿಗುವಷ್ಟು ವಿಟಮಿನ್ 'ಬಿ' ಒಂದು ಮಾವಿನಹಣ್ಣಿನಲ್ಲಿದೆ. ಈ ಹಣ್ಣು ಇತರೆ ಹಣ್ಣುಗಳಂತಲ್ಲ. ಬೇಗೆ ಕೊಳೆಯುತ್ತದೆ. ಕೊಳೆತ ಭಾಗವನ್ನು ತೆಗೆದುಹಾಕಿ ತಿನ್ನುವುದು ಉಚಿತವಲ್ಲ. ಕೊಳೆತ ಅಥವಾ ಕಳಿತ ಹಣ್ಣನ್ನು ತಿನ್ನಲೇಬಾರದು.

ಮಾವಿನ ಹಣ್ಣನ್ನು ತಿನ್ನುವುದರಿಂದ ಹಸಿವನ್ನು ನೀಗಿಸುತ್ತದೆ. ಶಕ್ತಿ ವರ್ಧಕವಾಗಿದೆ. ಜೀರ್ಣಕಾರಿ, ಬಾಯಾರಿಕೆಯನ್ನು ಶಮನಗೊಳಿಸುತ್ತದೆ. ಸಿಪ್ಪೆಯಲ್ಲಿ 'ಪೈಬರ್' ಅಂಶವಿರುವುದರಿಂದ ಮಲಬದ್ಧತೆ ಕಡಿಮೆಯಾಗುತ್ತದೆ. ರಕ್ತದ ಏರು ಒತ್ತಡ ಅಧೀನಕ್ಕೆ ಬರುತ್ತದೆ. ಸಿಪ್ಪೆ ಸಮೇತ ತಿನ್ನುವುದು ಆರೋಗ್ಯಕರ. ಪ್ರತಿದಿನ ಒಂದು ಲೋಟ ಹಣ್ಣಿನ ರಸಕ್ಕೆ ಹಾಲು ಮತ್ತು ಜೇನು ತುಪ್ಪ ಸೇರಿಸಿ ಸೇವಿಸುವುದರಿಂದ -ಹಸಿವು ಅಧಿಕವಾಗಿ, ತೂಕ ಕಡಿಮೆಯಾಗುವುದು. ಜ್ಞಾಪಕ ಶಕ್ತಿ ಹೆಚ್ಚಿ, ಕಿವುಡು ಕಡಿಮೆಯಾಗಿ, ವಾಸನಾ ಶಕ್ತಿ ಅಧಿಕಗೊಂಡು ನರಗಳ ದೃಢತೆ ವೃದ್ಧಿಯಾಗುವುದು. ಒಂದು ಲೋಟ ಹಣ್ಣಿನ ರಸಕ್ಕೆ ಒಂದು ಚಮಚ ಮಾವಿನಕಾಯಿಯ ರಸ ಸೇರಿಸಿ ಕುಡಿಯುವುದರಿಂದ ಗರ್ಭದಲ್ಲಿರುವ ಶಿಶು ಬೆಳೆಯಲು ಸಹಕಾರಿಯಾಗುತ್ತದೆ. ಎದೆ ಹಾಲು ವೃದ್ಧಿಸುತ್ತದೆ. ಮಾಸಿಕ ಮುಟ್ಟು ಮುಂದೂಡುತ್ತದೆ. ದಿನಕ್ಕೊಂದು ಹಣ್ಣು ತಿನ್ನುವುದರಿಂದ ಅಕಾಲಿಕ ವೃದ್ಧಾಪ್ಯ ಮುಂದೂಡಿ, ಚೈತನ್ಯ ಹೆಚ್ಚಿಸಿ ಆರೋಗ್ಯ ವೃದ್ಧಿಯಾಗುವುದು. ವೈದ್ಯರ ಪ್ರಕಾರ ಸಕ್ಕರೆ ಖಾಯಿಲೆ ಇರುವವರು ವಾರಕ್ಕೊಂದು ಚಿಕ್ಕ ಹಣ್ಣು ತಿನ್ನಬಹುದೆಂದು ಹೇಳುತ್ತಾರೆ.

ಮಾವಿನ ಹಣ್ಣಿನ ವಾಟೆಯೊಳಗಿನ ತಿರುಳನ್ನು ತೆಗೆದು ಪುಡಿಮಾಡಿ ಮಜ್ಜಿಗೆಯಲ್ಲಿ ಕುಡಿಯುವುದರಿಂದ ಬೇಧಿ ನಿಲ್ಲುತ್ತದೆ. ಈ ಪುಡಿಯನ್ನು ಎಣ್ಣೆಯಲ್ಲಿ ಸೇರಿಸಿ ತಲೆಗೆ ಹಚ್ಚುವುದರಿಂದ ತಲೆಹೊಟ್ಟು, ಕೂದಲು ಉದುರುವುದು ಮತ್ತು ನರೆ ಬರುವುದು ಕಡಿಮೆಯಾಗುತ್ತದೆ.

ಇನ್ನು ಮಾವಿನ ಎಲೆ ಭಾರತೀಯರಿಗೆ ಶುಭ ಸೂಚಕ. ಪೂಜೆ, ಯಜ್ಞ ಯಾಗಾದಿಗಳಲ್ಲಿ ಈ ಹಸಿರೆಲೆ ಅವಶ್ಯವಾಗಿ ಬೇಕೇ ಬೇಕು. ಹಬ್ಬ ಮತ್ತು ವಿಶೇಷ ಕಾರ್ಯಗಳಿಗೆ ಎಲೆಗಳ ತೋರಣ ಎಲ್ಲೆಲ್ಲೂ ರಾರಾಜಿಸುತ್ತದೆ. ಹಸಿರು ಕಣ್ಣಿಗೆ ತಂಪು ಹಾಗೂ ಸಮೃದ್ಧಿಯ ಸಂಕೇತ. ಹದವಾದ ಎಲೆಯನ್ನು ಬಾಯಲ್ಲಿ ಜಗಿಯುವುದರಿಂದ ವಸಡುಗಟ್ಟಿಯಾಗಿ, ಹಲ್ಲು ನೋವು ಕಡಿಮೆಯಾಗಿ, ರಕ್ತಸ್ರಾವ ನಿಲ್ಲುವುದು. ಅಗಿದು ನುಂಗುವುದರಿಂದ ಕೆಮ್ಮು ಮತ್ತು ಗಂಟಲು ನೋವು ನಿಲ್ಲುತ್ತದೆ. ಈ ರಸವನ್ನು ಕಾಲಿನ ಒಡೆದ ಹಿಮ್ಮಡಿಗೆ ಲೇಪಿಸುವುದರಿಂದ ನೋವು ಶಮನವಾಗಿ ಬಿರುಕಿನ ಆಳ ಮತ್ತು ಅಗಲ ಕ್ಷೀಣಿಸಿ ಕ್ರಮೇಣ ಸಮವಾಗುವುದು.

ಮಾವಿನ ಹೂಗಳ ಒಂದೆರಡು ಚಮಚ ರಸವನ್ನು ಜೇನುತುಪ್ಪದೊಂದಿಗೆ ಸೇವಿಸಿದರೆ ಭೇದಿ ನಿಲ್ಲುತ್ತದೆ. ಹೂಗಳ ರಸವನ್ನು ಚೇಳು ಕಡಿದ ಜಾಗಕ್ಕೆ ಹಚ್ಚುವುದರಿಂದ ಉರಿ ಮತ್ತು ನೋವು ಶಮನವಾಗುವುದು. ಇದೇ ರಸವನ್ನು ಮೊಸರು ಅಥವಾ ಎಳನೀರಿನೊಂದಿಗೆ ಸೇರಿಸಿ ಕುಡಿಯುವುದರಿಂದ ಮೂತ್ರ ರೋಗ, ಮೂತ್ರ ಉರಿ ಕಡಿಮೆಯಾಗಿ ಮೂತ್ರ ಸಲೀಸಾಗಿ ಹೊರಹೋಗುತ್ತದೆ. ಒಣಹೂಗಳನ್ನು ಕೆಂಡದ ಮೇಲೆ ಹಾಕುವುದರಿಂದ ಅದರ ಹೊಗೆಗೆ ಸೊಳ್ಳೆಗಳು ಓಟ ಕೀಳುತ್ತವೆ.

ಮಾವಿನ ತೊಗಟೆ ಬಹು ಉಪಯೋಗಕರ. ಇದರ ರಸದಿಂದ ಬಾಯಿ ಮುಕ್ಕಳಿಸಿದರೆ ಬಾಯಿ ಹುಣ್ಣು. ಗಂಟಲ ಕೆರೆತ ನಿಲ್ಲುತ್ತದೆ. ಇನ್ನು ಉಳಿದಿರುವುದು ಮಾವಿನ ಮರದ ಕಾಂಡ ಮತ್ತು ಕೊಂಬೆಗಳು. ಇವೆರಡು ಮರ ಮುಟ್ಟಾಗಿ ಮಾನವನಿಗೆ ಸಹಕಾರಿಯಾಗಿವೆ. ಇಡೀ ಮರವು ಪ್ರಾಣಿ ಪಕ್ಷಿಗಳಿಗೆ ಆಶ್ರಯಧಾಮವಾಗಿದೆ. ನೆರಳು ಕೊಟ್ಟಿದೆ, ಫಲ ನೀಡಿದೆ, ಔಷಧೀಯ ಗುಣಗಳನ್ನು ಹೊಂದಿ ಮಾನವನಿಗೆ ಸಹಕಾರಿಯಾಗಿದೆ. ಮರದ ಪ್ರತಿಯೊಂದು ಭಾಗವೂ ಒಂದಲ್ಲ ಒಂದು ರೀತಿ ಪ್ರಯೋಜನವಾಗಿದೆ. ಬಿದ್ದ ಮೇಲೂ ಉರುವಲಾಗುತ್ತದೆ. ಅದಕ್ಕೆ ಇದನ್ನು ಸ್ವರ್ಗದ ಹಣ್ಣಿನಗಿಡವೆನ್ನುವರು. ಮಾತನಾಡದ, ಚಲಿಸಲಾಗದ ಮರವೇ ಇಷ್ಟೊಂದು ಉಪಯೋಗಕಾರಿಯಾದಲ್ಲಿ, ಮಾತಾಡುವ, ಚಲಿಸುವ, ನರಮಾನವನಿಗೆ ಮರದ ಪ್ರಶ್ನೆ' ನಿನಾರಿ ಗಾದೆಯೋ ಎಲೆ ಮಾನವ'.







# ಮಣ್ಣಿನ ಆಂತರಿಕ ಬಳಕೆ *

-ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ

**ಮಣ್ಣಿನ ಆಂತರಿಕ ಬಳಕೆ :**

ಪ್ರಶ್ನೆ : 'ಏನ್ರೀ ಮಣ್ಣು ತಿನ್ನಿ ಅಂತೀರಾ?

ನಾವು ತಿನ್ನುತ್ತಿರುವ ಎಷ್ಟೋ ಆಹಾರಗಳಿಗಿಂತ ಮಣ್ಣೇ ಮೇಲು. ಆದರೆ ಮಣ್ಣು ತಿನ್ನಿರೆಂದು ನಾನು ಹೇಳುತ್ತಿಲ್ಲ. ಹಾಗೆ ಹೇಳಿದವರು ಮೈಕೇಲ್ ಅಭಿಸೇರಾ (Michel Abhisera)ದಿ ಹೀಲಿಂಗ್ ಕ್ಲೇ (The Healing Clay) ಎಂಬ ಅವರ ಪುಸ್ತಕದಲ್ಲಿ ಮಣ್ಣನ್ನು ತಿನ್ನುವಂತೆ ಹೇಳುತ್ತಾರೆ. ಮಣ್ಣಿನ ಚಿಕಿತ್ಸೆ, 'ಜೀವಂತ ಚಿಕಿತ್ಸೆ' ಎಂಬುದು ಅವರ ಮತ.

ದೊಡ್ಡವರು ಒಂದು ಟೀ ಚಮಚ ಪರಿಶುದ್ಧವಾದ ಮಣ್ಣನ್ನು ರಾತ್ರಿಯೇ ಶುದ್ಧವಾದ ನೀರಿಗೆ ಹಾಕಿ ಮುಚ್ಚಿಡಬೇಕು. ಬೆಳಿಗ್ಗೆ ಎದ್ದ ತಕ್ಷಣ ಅದನ್ನು ಕಲಕಿ ಕುಡಿಯಬೇಕು. ಮಕ್ಕಳಿಗೆ ೧/೨ ಟೀ ಚಮಚ. ಹೆಚ್ಚಿಗೆ ತೆಗೆದುಕೊಳ್ಳಬಾರದು. ಮಣ್ಣು ಹೊಟ್ಟೆಯಲ್ಲಿನ ವಿಷವಸ್ತುಗಳನ್ನೆಲ್ಲಾ ಹೀರಿಕೊಳ್ಳುತ್ತದೆಂದು ಅವರ ಅಭಿಮತ. ನಾವು ಸೇವಿಸುತ್ತಿರುವ ನಂಜನಗೂಡಿನ ಮೃತ್ತಿಕೆ, ನಾಗರ ಪಂಚಮಿಯ ದಿನದ ಹುತ್ತದ ಮೃತ್ತಿಕೆಯ ಸೇವನೆ ಇವುಗಳ ಹಿಂದೆಯೂ ಸಹ ಇದೇ ತತ್ವವಿರಬೇಕು.

**ಅಡಾಲ್ಫ್ ಜಸ್ಟ್ (Adolf Just) ನ ಕೊಡುಗೆ 'ಬರಿಗಾಲಿನ ನಡಿಗೆ':** ಈಗ ಬರಿಗಾಲಿನ ನಡಿಗೆಯನ್ನು ಯೋಚಿಸಲೂ ಸಾಧ್ಯವಿಲ್ಲ. ಹಳ್ಳಿಗಳಲ್ಲಿ ನಾನಾ ರೀತಿಯ ಅನುಕೂಲಗಳಿವೆ. ಆದ್ದರಿಂದ ಬೆಳಗಿನ ವಾಕಿಂಗ್ ನಲ್ಲಾದರೂ ಬರಿಗಾಲಿನಲ್ಲಿ ಹುಲ್ಲಿನ ಮೇಲೆ ನಡೆಯುವುದು ಉತ್ತಮ. ಮಕ್ಕಳಿಗೆ ಬೂಟ್ಸ್ ಹಾಕುವುದರಿಂದ ಅವುಗಳ ನೆಗಡಿ ಹೆಚ್ಚುತ್ತದೆಂದು ರಷ್ಯಾದ ವಿಜ್ಞಾನಿಗಳ ಸಂಶೋಧನೆ. ಮಕ್ಕಳಿಗೆ ಬೂಟ್ಸ್ ಹಾಕದಿದ್ದರೆ ಬುದ್ಧಿ ತಲೆಗೆ ಹತ್ತುವುದಿಲ್ಲವೆಂದು ನಮ್ಮ ಈಚಿನ ನಂಬಿಕೆ ! ಬಹುಶಃ ಕಲಿತ ಬುದ್ಧಿ ಕಾಲಿನಿಂದ ಹೊರಕ್ಕೆ ಹೋಗಿಬಿಡಬಹುದೆಂಬ ಭೀತಿ ಇರಬಹುದು !! ಈಗಿನ ವಿದ್ಯೆ ಬಹಳ ತೆಳು ಆದ್ದರಿಂದ ಆ ಬಂಧವಿರಬೇಕು !? ನಡೆಯುವಾಗ, ಮಲಗುವಾಗ ಭೂಮಿಯ ಸಂಪರ್ಕದಿಂದ ದೂರವಿರುವ ಪ್ರಾಣಿ ಮನುಜನೊಬ್ಬನೇ ! ಭೂಮಿಯ ಅಯಸ್ಕಾಂತಿಯ ಗುಣದ ಉಪಯೋಗಕ್ಕೆ ಭೂಮಿಗೂ ಮನುಜನಿಗೂ ನೇರ ಸಂಪರ್ಕ ಅವಶ್ಯಕ. ನಾವು ಮಧ್ಯೆ ರಬ್ಬರಿನ ಚಪ್ಪಲಿ, ವಿದ್ಯುದ್ವಾಹಕವಲ್ಲದ ವಸ್ತುಗಳನ್ನು ಬಳಸುತ್ತೇವೆ. ಇಂದಿಗೂ ಎಷ್ಟೋ ಹಳ್ಳಿಯ ಮಂದಿ ಬರಿಗಾಲಿನಲ್ಲಿ ನಡೆಯುತ್ತಾರೆ. ಈ ಅಭ್ಯಾಸ ತಿಳಿವಳಿಕೆಯಿಂದಲ್ಲ, ಮುಖ್ಯವಾಗಿ ಬಡತನದಿಂದ ಹಾಗೂ ರೂಢಿಯಿಂದ. ಅಂತಹವರ ಕಾಲಿನ ಆರೋಗ್ಯ ಹಾಗೂ ಶರೀರದ ಇತರ ಅಂಗಗಳ ಆರೋಗ್ಯವೂ ಸಹ ಚಪ್ಪಲಿ ಹಾಕಿಕೊಳ್ಳುವವರಿಗಿಂತ ಉತ್ತಮವಾಗಿರುತ್ತದೆ. ನಗರದ ನಾಗರೀಕತೆ ಮನುಷ್ಯನನ್ನು ಭೂಮಿಯಿಂದ ದೂರ ಮಾಡಲು ಪ್ರಯತ್ನಿಸುತ್ತದೆ. ನಮ್ಮ ಹೈಹೀಲ್ಡ್ ಶೂಗಳು ನಮ್ಮನ್ನು ಭೂಮಿಯಿಂದ ಎತ್ತರಕ್ಕೆತ್ತಿ ಆಕಾಶದ ಕಡೆಗೆ ಬೇಗ ಒಯ್ಯಲು ಹವಣಿಸುತ್ತದೆ. ಭೂಮಿಯಿಂದ ನಾವು ದೂರವಾದಷ್ಟು ನಮ್ಮ ರೋಗಗಳು ಹೆಚ್ಚುತ್ತದೆನ್ನುವುದು ಅನುಭವಸ್ಥರ ಮತ. ಒಟ್ಟಿನಲ್ಲಿ ನಮ್ಮ ಆರೋಗ್ಯ, ಅನಾರೋಗ್ಯಗಳಿಗನುಗುಣವಾಗಿ ಆಂತರಿಕವಾಗಿ (ಆಹಾರ) ಬಾಹ್ಯವಾಗಿ ಹಿತ-ಮಿತವಾಗಿ ಬಳಸಿಕೊಳ್ಳಬೇಕು.

ಮಣ್ಣಿನ ಬಗ್ಗೆ ನಮಗಿರುವ ಜ್ಞಾನಕ್ಕೆ ಉದಾಹರಣೆಯಾಗಿ ನನ್ನ ಒಂದು ಸಣ್ಣ ಅನುಭವ.

ಒಮ್ಮೆ ನಾನು ಒಂದು ನಿಸರ್ಗಚಿಕಿತ್ಸಾಲಯಕ್ಕೆ ಭೇಟಿ ಕೊಟ್ಟಿದ್ದೆ. ಅಲ್ಲಿ ಮೃತ್ತಿಕಾ ಸ್ನಾನಕ್ಕಾಗಿ ಐದಾರು ಮಂದಿಗೆ ಮೈಎಲ್ಲಾ ಮಣ್ಣು ಮೆತ್ತಿ ಬಿಸಿಲಿನಲ್ಲಿ ಕೂಡಿಸಿದ್ದರು. ಅವರನ್ನು ಕೇಳಿದೆ, ಇದು ಏತಕ್ಕೆಂದು? ಬಂದ ಉತ್ತರ – "ಇದು Punishment' ನನಗೆ ಆಯಿತು. Astonishment. ನಾನು ಹೇಳಿದೆ 'ನಿಮಗಿದು Treatment' "ಏನು ಟ್ರೀಟ್

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

ಮೆಂಟೋ ಸದ್ಯಕ್ಕಂತೂ ನಮಗೂ ಪನಿಷ್‌ಮೆಂಟೇ'. ಇದು ಅವರ ಗೊಣಗಾಟ. ಇದಕ್ಕೆ ಕಾರಣ ಮಣ್ಣಿನ ಬಗ್ಗೆ ಇರುವ ತಾತ್ಸಾರ. ಮಣ್ಣಿಗೆ ಜೀವವಿಲ್ಲದಿರಬಹುದು ಆದರೆ, ಜೀವ ಕೊಡುವ ಶಕ್ತಿಯಿಂದ ಅದಕ್ಕೆ ಜೀವವನ್ನು ರಕ್ಷಿಸುವ ಶಕ್ತಿಯೂ ಇದೆ. ಜೀವವನ್ನು ರಕ್ಷಿಸುವ ಶಕ್ತಿಯಿಂದ ರೋಗವನ್ನು ಕಳೆಯುವ ಶಕ್ತಿಯೂ ಇದೆ. ಶರೀರದ ಪುಷ್ಟಿಗೆ, ಅದರ ಬೆಳವಣಿಗೆಗೆ, ಶುಚಿಗೊಳಿಸಲು ಮೊದಲ ಸ್ಥಾನದಲ್ಲಿರುವುದು ಮಣ್ಣು. ಮಣ್ಣಿನ ಬಗ್ಗೆ ಬರೆಯುವ ಶಕ್ತಿ ನನಗುಂಟೇ?' ಇದು ಮಣ್ಣನ್ನು ಅರ್ಥಮಾಡಿಕೊಳ್ಳುವ ಕಿರು ಪ್ರಯತ್ನವಷ್ಟೇ. ಪಂಚಭೂತಗಳು ಪರಮಾತ್ಮನ ಕೊಡುಗೆ ಅವು ಅವನಷ್ಟೇ ನಿಗೂಢವೂ ಹೌದು. ಪ್ರಕೃತಿ ಮಾತೆಯಾಗಿರುವುದರಿಂದ ಕರುಣೆ ತೋರುವಳೆಂಬ ನಂಬಿಕೆ. ಮಾತೆಯಾದ ಪ್ರಕೃತಿ, ತಂದೆಯಾದ ಪರಮಾತ್ಮ ಇಬ್ಬರೂ ಅವರ ಪುತ್ರರಾದ ನಮ್ಮನ್ನು ಕರುಣೆಯಿಂದ ಕ್ಷಮಿಸದೆ ಮತ್ಯಾರು ಆ ಕೆಲಸ ಮಾಡುವವರು. ತುಂಟ ಮಕ್ಕಳಾದ, ಉದ್ಧಟಿಗಳಾದ ನಾವು ಆ ಮಣ್ಣನ್ನೇ ಹಾಳುಗೆಡವಿದ್ದೇವೆ. ಅದನ್ನು ಅರಿತು ಮಣ್ಣಿನ ಸಂರಕ್ಷಣೆಯ ಬಗ್ಗೆ ಮತ್ತೆ ಚಿಂತಿಸುವ, ಆ ಶುದ್ಧಳಾದ ಭೂಮಿತಾಯಿಗೆ ರಾಸಾಯನಿಕಗಳನ್ನು ತುಂಬಿದ ರೈತ, ಅವನನ್ನು ಅಡ್ಡ ಮಾರ್ಗಕ್ಕೆಳೆದ, ಪ್ರಕೃತಿಯನ್ನು ಅಪಾರ್ಥ ಮಾಡಿಕೊಂಡ ವಿಜ್ಞಾನ, ಪೂಜ್ಯಳನ್ನು ಸೇವಕಳೆಂದು ತಿಳಿದ ಉದ್ಧಟತನ ಬಿಟ್ಟು ಮತ್ತೆ ಅವಳಲ್ಲಿ ನಮ್ರವಾಗಿ ಪ್ರಾರ್ಥಿಸೋಣ, ಅವಳನ್ನು ಪೂಜಿಸೋಣ. ನಮ್ಮ ಆರೋಗ್ಯದಲ್ಲಿ ಹಾಗೂ ನಮ್ಮ ರೋಗದಲ್ಲಿ ಅವಳ ಉಪಯೋಗವನ್ನು ಪಡೆಯೋಣ.

*ಇಷ್ಟು ದಿನವಾದರೂ ಮಾಯಲಿಲ್ಲ ಊತ*
*ಹಾಳಾಗಲಿ, ಹಾಕು ಮಣ್ಣೆಂಬ ಪಂಚಭೂತ*
*ಆಶ್ಚರ್ಯ ! ಆಯಿತಲ್ಲ ವಾಸಿ*
*ಮತ್ತೇಕೆ ಬೇರೆ ಔಷಧಗಳ ಘಾಸಿ.*
*ಮಗನೇ ಕೇಳು ಮಣ್ಣಿನಿಂದ ಮಾನವ*
*ಮಣ್ಣು ಮರೆತು ಆಗಿಹೆ ನೀ ದಾನವ*
*ಮಣ್ಣಿಂದ ಚಿಗುರು*
*ಮಣ್ಣೇ ಉಸಿರು*
*ಮಣ್ಣೇ ಬೇಕು ನಿನ್ನ ಸಕಲಕೂ*
*ಅದ ಬಿಟ್ಟು ಹೇಗೆ ನಡೆಯುವುದು ನಿನ್ನ ಬದುಕು?*
*ಅನಾರೋಗ್ಯದಲ್ಲೂ ಅದನ್ನೇ ಬಳಸು*
*ಕೈಗೂಡುವುದು ಬೇರೆ ಔಷಧ ಬೇಡವೆಂಬ ನಿನ್ನ ಕನಸು*
*ಸುಲಭ ಸರಳ ಉಪಾಯ*
*ಮಿಕ್ಕೆಲ್ಲವೂ ವೆಚ್ಚದ ಜೊತೆಗೆ ಅಪಾಯ.*

ನಿಸರ್ಗೋಪಚಾರ ನಡೆಸುವವರ ಮನೆಯಲ್ಲಿ ಇರಲೇಬೇಕಾದ ವಸ್ತುಗಳು ಬಹಳ ಕಡಿಮೆ. ಅವುಗಳು ಯಾವುವೆಂದರೆ,

೧. ಒಂದು ಎನಿಮಾ ಕ್ಯಾನ್.
೨. ಒಂದು ನೇತಿಯ ಪಾತ್ರೆ.
೩. ಒಂದು ಐ-ಕಪ್.
೪. ಒಂದು ಬೆನ್ನುಹುರಿ ಸ್ನಾನದ ತೊಟ್ಟಿ.
೫. ಒಂದು ಕಟಿಸ್ನಾದ ತೊಟ್ಟಿ (ಅಥವಾ ಕೇವಲ ಬೆನ್ನುಹುರಿ ಸ್ನಾನದ ತೊಟ್ಟಿ)
೬. ಒಂದು ಮಡಿಕೆಯ ತುಂಬಾ ಹುತ್ತದ ಮಣ್ಣು.
೭. ಪಟ್ಟಿಗಳನ್ನು ಹಾಕಲು ಹಳೆಯ ಹತ್ತಿಬಟ್ಟೆಗಳು ಅದರ ಅಳತೆಗೆ ಉಲ್ಲನ್ ಬಟ್ಟೆಗಳು.

**ಇಷ್ಟು ಮನೆಯಲ್ಲಿದ್ದರೆ ಮನೆಯೇ ಅವನ ಹೈಟೆಕ್ ಆಸ್ಪತ್ರೆ ನುಂಗಬೇಕಿಲ್ಲ ಯಾವುದೇ ಮಾತ್ರೆ !** ❐

## ಪರಂಗಿ ಹಣ್ಣು

ಆಹಾರ ಸೇವನೆಯ ನಂತರ ಪರಂಗಿ ಹಣ್ಣನ್ನು ತಿನ್ನುವುದರಿಂದ ಪಚನ ಕ್ರಿಯೆ ವೃದ್ಧಿಗೊಳ್ಳುವುದು. ಮೂಲ ವ್ಯಾಧಿಯಿಂದ ರಕ್ತ ಬೀಳುತ್ತಿದ್ದರೆ ಹಣ್ಣಿನ ಸೇವನೆಯಿಂದ ನಿಲ್ಲುವುದು. ನರ ದೌರ್ಬಲ್ಯದಿಂದ ದೂರವಿರಲು ದಿನವೂ ಹಾಲು ಜೇನುತುಪ್ಪದೊಡನೆ ಕೆಲ ಹೋಳು ಪರಂಗಿ ಹಣ್ಣನ್ನು ಸೇವಿಸಬೇಕು. ಪರಂಗಿ ಹಣ್ಣಿನ ಬೀಜವನ್ನು ತಿನ್ನುವುದರಿಂದ ಹೊಟ್ಟೆಯಲ್ಲಿರುವ ಜಂತುಹುಳುಗಳು ಸಾಯುತ್ತವೆ. ಪರಂಗಿ ಹಣ್ಣನ್ನು ಚರ್ಮದ ಮೇಲೆ ಹಚ್ಚುತ್ತಿದ್ದರೆ ಚರ್ಮ ಮೃದುವಾಗುವುದಲ್ಲದೆ ಕಾಂತಿಯೂ ಹೆಚ್ಚುವುದು. ಪರಂಗಿ ಹಣ್ಣನ್ನು ಗರ್ಭಿಣಿ ಸ್ತ್ರೀಯರು ಸೇವಿಸಬಾರದು. ಹಾಗೆ ಸೇವಿಸಿದರೆ ಗರ್ಭಪಾತವಾಗುವ ಸಂಭವ ಉಂಟು.

RNI No. 17139/69 "Siddaganga" Monthly - Postal Reg. No. KA/SK/TMR/385/2009-11

# ೨೦೧೦-೧೧ ನೇ ಶೈಕ್ಷಣಿಕ ಸಾಲಿಗೆ
# ಶ್ರೀಮಠದಲ್ಲಿ ವಿದ್ಯಾರ್ಥಿಗಳ ದಾಖಲಾತಿ ಪ್ರಕ್ರಿಯೆಯ ದೃಶ್ಯಾವಳಿಗಳು














Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087